


# ಗುಣಾತ್ಮಕ ಸ್ಪರ್ಶ

### ತಿರುಮಲೆ - ತಿರುಪತಿ ದೇವಸ್ಥಾನಗಳವರು ಆರಂಭಿಸಿರುವ

## ಶ್ರೀ ಬಾಲಾಜಿ ಆರೋಗ್ಯ ವರಪ್ರಸಾದಿನೀ ಯೋಜನೆ

ಪ್ರಾಚೀನ ಕಾಲದಿಂದಲೂ ತಿರುಮಲೆಯು ಒಂದು ಮಹತ್ವದ ಯಾತ್ರಾಕ್ಷೇತ್ರವಾಗಿದ್ದು ಪ್ರತಿದಿನವೂ ಸಾವಿರಾರು ಮಂದಿ ಯಾತ್ರಿಕ ಭಕ್ತರು ಆಗಮಿಸಿ ಶ್ರೀ ವೆಂಕಟೇಶ್ವರಸ್ವಾಮಿಯಲ್ಲಿ ತಮ್ಮ ಐಹಿಕ ಆಧ್ಯಾತ್ಮಿಕ ಕ್ಷೇಮ ಲಾಭಗಳಿಗಾಗಿ ಪ್ರಾರ್ಥನೆ ಸಲ್ಲಿಸುತ್ತಿದ್ದಾರೆ

ಯಾತ್ರಿಕ ಸೇವೆಯಲ್ಲಿ ಸಮರ್ಪಿತವಾಗಿರುವ ತಿ ತಿ ದೇವಸ್ಥಾನಗಳ ಮಾನವಸೇವೆಯ ಒಂದು ಭಾಗವೇ ರೋಗ ಚಿಕಿತ್ಸೆ, ತಿ ತಿ ದೇವಸ್ಥಾನಗಳು ಈಗಾಗಲೇ ಒಂದು ಕುಷ್ಠರೋಗ ನಿವಾರಣಾಕೇಂದ್ರ, ವಿಕಲಾಂಗ ಚಿಕಿತ್ಸಾ ಆಸ್ಪತ್ರೆ, ಅನಾದಾಲಯ, ಕೇಂದ್ರ ಆಸ್ಪತ್ರೆಗಳನ್ನು ನಿರ್ವಹಿಸುತ್ತಿವೆ ಅಗತ್ಯವಿರುವ ಬಡ ರೋಗಿಗಳ ಸೇವೆಗೆಂದು ದೆಹಲಿ, ಪಾಂಡಿಚೇರಿ ಚಂದಿಗಢಗಳಲ್ಲಿರುವಂತೆ, ಅತ್ಯಾದುನಿಕ ಯಂತ್ರೋಪಕರಣಗಳಿಂದ ಕೂಡಿದ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ - ಶ್ರೀ ವೆಂಕಟೇಶ್ವರ ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ (ಸ್ವಿಮ್ಸ್) ಅನ್ನು ಸ್ವಾಮಿಯ ಆಶೀರ್ವಾದದೊಡನೆ ಆರಂಭಿಸಲಾಗಿದೆ ಇಲ್ಲಿ ವೈದ್ಯಕೀಯ ವಿಜ್ಞಾನದ ಸೇವೆ, ತರಬೇತಿ, ಶಿಕ್ಷಣಗಳನ್ನು ನೀಡುವುದೇ ಅಲ್ಲದೆ, ಸಂಶೋದನೆ, ಅಭಿವೃದ್ಧಿಗಳನ್ನೂ ಸಾಧಿಸಲು ಅವಕಾಶ ಮಾಡಲಾಗಿದೆ

ಇಂತಹ ಅತ್ಯಾಧುನಿಕ ಯಂತ್ರೋಪಕರಣಗಳ ಆಸ್ಪತ್ರೆಯ ಅನುಕೂಲಗಳು ನಮ್ಮ ಎಲ್ಲ ಸಹೋದರರಿಗೂ ಸಿಗುವಂತಾಗಬೇಕು

ಈ ಘನ ಉದ್ದೇಶದಿಂದ ಶ್ರೀ ಬಾಲಾಜೀ ಆರೋಗ್ಯ ವರಪ್ರಸಾದಿನೀ ಯೋಜನೆಯನ್ನು ಆರಂಭಿಸಲಾಗಿದೆ ಇದರಿಂದಾಗಿ ಅಗತ್ಯವಿರುವ ಎಲ್ಲರಿಗೂ ಅನುಕೂಲಕರವಾದ ದರಗಳಲ್ಲಿ ಅತ್ಯಾದುನಿಕ ಸೌಕರ್ಯಗಳ ಚಿಕಿತ್ಸಾ ಸೌಲಭ್ಯ ದೊರೆಯುವಂತೆ ಆಗುವುದು ಈ ಯೋಜನೆಯ ವಿವರಗಳನ್ನು ಕೆಳಗೆ ನೀಡಲಾಗಿದೆ ದಾನಿಗಳು ಉದಾರ ಹೃದಯದಿಂದ ದಾನ ನೀಡಬೇಕೆಂದು ಆಹ್ವಾನಿಸುತ್ತೇವೆ

**ಯೋಜನೆಯ ವಿವರ :**

* ಸ್ವಿಮ್ಸ್‌ಗೆ ನೀಡುವ ಎಲ್ಲ ದಾನಗಳೂ 80 (ಜಿ) ಕಲಮಿನಂತೆ 100 ಶತಾಂಶ ಆದಾಯಕರ ವಿಮುಕ್ತವಾಗಿರುವುದು
* ದಾನಗಳನ್ನು ಯಾರುಬೇಕಾದರೂ - ವ್ಯಕ್ತಿ, ಕುಟುಂಬ, ಸಂಘ, ಸಂಸ್ಥೆಗಳು - ಮಾಡಬಹುದು
* ಒಂದು ಲಕ್ಷ ರೂಪಾಯಿ ಹಾಗೂ ಹೆಚ್ಚಿನ ಹಣ ನೀಡಿದವರ ಹೆಸರುಗಳನ್ನು ಆಸ್ಪತ್ರೆಯ ಸ್ವಾಗತ ಕಚೇರಿಯಲ್ಲಿ ಪ್ರಕಟಿಸಲಾಗುವುದು
* ಐದು ಲಕ್ಷ ಮತ್ತು ಹೆಚ್ಚಿನ ಹಣ ದಾನ ಮಾಡಿದವರ ಹೆಸರುಗಳನ್ನು ಕೋಣೆಗಳಿಗಿಡಲಾಗುವುದು
* ಒಂದು ಉಪವಿಭಾಗಕ್ಕೆ 15 ಲಕ್ಷ ರೂಪಾಯಿಗಳಿಗಿಂತ ಹೆಚ್ಚು ದಾನ ನೀಡಿದವರ ಹೆಸರನ್ನಿಡಬಹುದು
* 15 ಲಕ್ಷ ರೂ ಗಳಿಗೂ ಹೆಚ್ಚಿನ ದಾನ ನೀಡುವವರ ಹೆಸರಿನಲ್ಲಿ ಒಂದು ಘಟಕವನ್ನೂ ಹೆಸರಿಸಬಹುದು
* ಒಂದು ಸ್ನಾತಕೋತ್ತರ ಶಿಕ್ಷಣ ವಿದ್ಯಾರ್ಥಿನಿಲಯ, ಶಸ್ತ್ರಚಿಕಿತ್ಸಾ ಕೋಣೆ, ನರ್ಸ್‌ಗಳ ವಸತಿ ಗೃಹ, ರೋಗಿಗಳ ನೆರವಿಗರ ಸತ್ರಗಳಲ್ಲಿ ಒಂದಕ್ಕೆ - ಒಂದು ಕೋಟಿ ರೂಪಾಯಿ ನೀಡುವವರ ಹೆಸರನ್ನಿಡಬಹುದು
* ಐದು ಲಕ್ಷ ರೂಪಾಯಿಗಳ ದಾನದ ಮೂಲಕ ವರ್ಷದಲ್ಲಿ ಒಂದು ಪ್ರಮುಖ ಶಸ್ತ್ರ ಚಿಕಿತ್ಸೆಯನ್ನು ಆಗಮಾಡಿಸಬಹುದು
* ಪೂರ್ಣವಾಗಿ ಸಂಶೋಧನೆಯ ಉದ್ದೇಶದ ಪೀಠಗಳನ್ನು ಹತ್ತು ಲಕ್ಷ ರೂಪಾಯಿ ದಾನಗಳಿಂದ ಸ್ಥಾಪಿಸಬಹುದು

**ಐದು ಲಕ್ಷ - ಮತ್ತು ಹೆಚ್ಚಿನ ದಾನ ನೀಡುವವರಿಗೆ ತಿರುಮಲೆಯಲ್ಲಿ ಕಲ್ಪಿಸುವ ಸೌಲಭ್ಯಗಳು**

* ಸ್ವಾಮಿಯ ಓಲಗದಲ್ಲಿ ಆವರ್ತನ ಪದ್ಧತಿಯಲ್ಲಿ ದಾನಿಯ ಹೆಸರನ್ನು ಹೇಳಲಾಗುವುದು
* ವರ್ಷದಲ್ಲಿ ಮೂರುದಿನಗಳು ದಾನಿಯ ಕುಟುಂಬದ ಐವರಿಗೆ ಬಿಡುವಿನ ಸಮಯದಲ್ಲಿ ಆರತಿ ಸಮೇತ ಸ್ವಾಮಿ ದರ್ಶನದ ಏರ್ಪಾಡು
* ವರ್ಷದಲ್ಲಿ ಮೂರು ದಿನಗಳ ಕಾಲ ದಾನಿಯ ಕುಟುಂಬದ ಐವರಿಗೆ ಅತಿಗಣ್ಯ ವ್ಯಕ್ತಿಗಳ ವಸತಿಯನ್ನು ಉಚಿತವಾಗಿ ನೀಡಲಾಗುವುದು
* ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಬಂಗಾರದ ಚಿತ್ರದ ಜ್ಞಾಪಿಕೆಯನ್ನು ದಾನಿಗೆ ನೀಡಲಾಗುವುದು
* ದಾನಿಗಳು ಆಸ್ಪತ್ರೆಗೆ ಬೇಕಾದ ಉಪಕರಣಗಳು, ವಾಹನಗಳು, ದಾನ ನೀಡಬಹುದು ಅಪೇಕ್ಷೆ ಪಟ್ಟಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿನ ಆರೋಗ್ಯ ತಪಾಸಣಾ ಶಿಬಿರಗಳನ್ನು ನಡೆಸಲು ಮುಂದೆ ಬರಬಹುದು

ಮಿಕ್ಕ ವಿವಯಗಳನ್ನು ತಿಳಿಯಲು ಬರೆಯಬೇಕಾದ ವಿಳಾಸ-


**ಕಾರ್ಯನಿರ್ವಹಣಾಧಿಕಾರಿ,**
ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

ಅಥವಾ

**ನಿರ್ದೇಶಕರು,**
ಶ್ರೀ ವೆಂಕಟೇಶ್ವರ ಇನ್ಸ್ಟಿಟ್ಯೂಟ್ ಆಫ್
ಮೆಡಿಕಲ್ ಸೈನ್ಸಸ್, ತಿರುಪತಿ



ಉತ್ತಮರ ಸಂಗ ಎನಗಿತ್ತು ಸಲಹೊ
ಚಿತ್ತಜ ಜನಕ ಸರ್ವೋತ್ತಮ ಮುಕುಂದ

ತಿರುತಿರುಗಿ ಪುಟ್ಟಲಾರೆ ಪರರ ಬಾಧಿಸಲಾರೆ
ಪರಿಪರಿಯ ಪಾಪಗಳ ಮಾಡಲಾರೆ
ಮರಣ ಜನನಗಳೆರಡು ಪರಿಹರವ ಮಾಡಯ್ಯ
ಕರುಣಾ ಸಮುದ್ರ ಮುರವೈರಿ ಶ್ರೀಕೃಷ್ಣ

ಏನ ಪೇಳಲಿ ದೇವ ನಾ ಮಾಡಿದ ಕರ್ಮ
ನಾನಾ ವಿಚಿತ್ರವೈ ಶ್ರೀನಿವಾಸ
ಹೀನ ಜನರೊಳಗಾಟ ಶ್ವಾನಾದಿಗಳ ಕೂಟ
ಜ್ಞಾನವಂತನ ಮಾಡೋ ಜಾನಕೀರಮಣ

ನಿನ್ನ ನಂಬಿದ ಮೇಲೆ ಇನ್ನು ಭಯವ್ಯಾತಕೆ
ಪನ್ನಗಾಧಿಪಶಯನ ಮನ್ನಿಸಯ್ಯ
ಮುನ್ನ ಭಕುತರನೆಲ್ಲ ಚೆನ್ನಾಗಿ ಪಾಲಿಸಿದ
ಎನ್ನೊಡೆಯ ರಂಗವಿಠಲ ಎನ್ನ ದೊರೆಯೆ

- ಶ್ರೀವಾದರಾಜರು.

ಸಂದರ್ಶಿಸಿ ಆರಾಧಿಸಿ ಆನಂದಿಸಿ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

# ತಿರುಚಾನೂರು



# ವಾರ್ಷಿಕ ಬ್ರಹ್ಮೋತ್ಸವಗಳು

## 5-12-99 ರಿಂದ 13-12-99 ವರೆಗೆ

ಉತ್ಸವ ಕಾರ್ಯಕ್ರಮ

| ದಿನಾಂಕ | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 4-12-99 | ಶನಿವಾರ | | ಅಂಕುರಾರ್ಪಣೆ |
| | | | ಸೇನಾಪತಿ ಉತ್ಸವ |
| 5-12-99 | ಭಾನುವಾರ | ಧ್ವಜಾರೋಹಣ | ಚಿಕ್ಕಶೇಷವಾಹನ |
| 6-12-99 | ಸೋಮವಾರ | ದೊಡ್ಡಶೇಷವಾಹನ | ಹಂಸವಾಹನ |
| 7-12-99 | ಮಂಗಳವಾರ | ಮುತ್ತಿನಚಪ್ಪರವಾಹನ | ಸಿಂಹವಾಹನ |
| 8-12-99 | ಬುಧವಾರ | ಕಲ್ಪವೃಕ್ಷವಾಹನ | ಹನುಮದ್‌ವಾಹನ |
| 9-12-99 | ಗುರುವಾರ | ಪಲ್ಲಕ್ಕಿ ಉತ್ಸವ | ಗಜವಾಹನ |
| | | ಸಂಜೆ ವಸಂತೋತ್ಸವ | |
| 10-12-99 | ಶುಕ್ರವಾರ | ಸರ್ವಭೂಪಾಲವಾಹನ | ಗರುಡೋತ್ಸವ |
| 11-12-99 | ಶನಿವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 12-12-99 | ಭಾನುವಾರ | ರಥೋತ್ಸವ | ಅಶ್ವವಾಹನ |
| 13-12-99 | ಗುರುವಾರ | ಚಕ್ರಸ್ನಾನ, ಪಂಚಮಿತೀರ್ಥ | ಧ್ವಜಾವರೋಹಣ |

ಸೂಚನೆ. ತಿರುಚಾನೂರು ತಿರುಪತಿಯಿಂದ ಐದು ನಿಮಿಷದ ಬಸ್ ಹಾದಿ ಒಂದರ ಹಿಂದೊಂದು ಬಸ್‌ಗಳು ಲಭ್ಯ. ಬ್ರಹ್ಮೋತ್ಸವ ದಿನಗಳಲ್ಲಿ ಸಾಂಸ್ಕೃತಿಕಾರ್ಯಕ್ರಮಗಳುಂಟು

ನೀವೂ ಬನ್ನಿ ತಿ.ತಿ.ದೇ. ನಿಮ್ಮವರನ್ನೂ ಕರೆತನ್ನಿ






ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ.ತಿ.ದೇ
ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ 4-00**
**ವಾರ್ಷಿಕ ಚಂದಾ 48-00**



ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ
ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ

ಸಂಪುಟ 30 ನವಂಬರ್ 1999 ಸಂಚಿಕೆ - 6

## ವಿಷಯಸೂಚಿ



*ಮುಖಚಿತ್ರ* ಪುಷ್ಪಯಾಗದಲ್ಲಿ ಶ್ರೀಭೂಸಹಿತ ಮಲೆಯಪ್ಪಸ್ವಾಮಿ.
*ಹಿಂಬದಿಯಲ್ಲಿ* . ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ, ನಾರಾಯಣವನ.




ಮನುಷ್ಯ ಹುಟ್ಟಿದ ಮೇಲೆ ದೆಳೆಯುತ್ತಾನೆ ಪ್ರಾಣಿಗಳೂ ದೆಳೆಯುತ್ತವೆ ಸಸ್ಯಗಳೂ ದೆಳೆಯುತ್ತವೆ ಮನುಷ್ಯ ಮಾತ್ರವೇ ತನ್ನ ದೆಳವಣಿಗೆಯಲ್ಲಿ ಬುದ್ಧಿಯನ್ನೂ ಬಳಸಿಕೊಂಡು ಮತ್ತೂ ಹಸನಾಗಿ ಹುಲುಸಾಗಿ ಸಾರ್ಥಕವಾಗಿ ಬಳೆಯಬಲ್ಲ. ಈ ಬಳವೆ ಅಥವಾ ದೆಳವಣಿಗೆ ತನ್ನ ಉದ್ಧಾರಕ್ಕಾಗಿ, ಏಳ್ಗೆಗಾಗಿ ಎಂದರೆ ಹಿಂದೆ ಇದ್ದ ಸ್ಥಿತಿಗಿಂತಲೂ ಉತ್ತಮ ಆಗುವುದಕ್ಕಾಗಿ ಎಂದಾಗ ಇಲ್ಲಿ ಒಂದು ರೀತಿಯ ಶಿಸ್ತಿನ ಅಗತ್ಯವಿರುತ್ತದೆ ಹಿಂಸೆಯಿಲ್ಲದೆ ಶಾಂತಿಯಿಂದ, ದ್ವೇಷವಿಲ್ಲದೆ ಪ್ರೀತಿಯಿಂದ ನಡೆಯದೇಕಾದ ಅನಿವಾರ್ಯತೆ ಉಂಟಾಗುತ್ತದೆ ಇದೆಲ್ಲ ದೆಳವಣಿಗೆಯ ಭೌತಿಕ ಲೋಕಕ್ಕೇ ಸೀಮಿತವಾಗದೆ ಪುರುಷಾರ್ಥ ಸಮಸ್ತಕ್ಕೂ ಅನ್ವಯವಾಗುವಂತಹ ಅವಕಾಶಗಳೂ ಇಲ್ಲದಿಲ್ಲ

ಪ್ರಶ್ನೆ - ಮನುಷ್ಯನ ದಳವಣಿಗೆಯಲ್ಲಿ ಹಬ್ಬ ಹರಿದಿನಗಳ ಪಾತ್ರವನ್ನು ಕುರಿತಾದದ್ದು ಸನಾತನ ಧರ್ಮದಲ್ಲಿ ವರ್ಷದುದ್ದಕ್ಕೆ ಹಬ್ಬ ಹರಿದಿನಗಳನ್ನು ಹುಟ್ಟು ಹಾಕಿದರು ಇದನ್ನು ಆಚರಿಸುವುದರಿಂದ ಇಂತಹ ಒಳ್ಳೆಯದು ಆಗುತ್ತದೆ ಇಂತಹ ವ್ರತದಿಂದ ಇಂತಹ ಪುಣ್ಯಪ್ರಾಪ್ತಿ ಆಗುತ್ತದೆ - ಇನ್ನೂ ಮುಂದುವರೆದು ಇಂತಹ ಉಪವಾಸದಿಂದ ಇಂತಹ ಪಾಪನಾಶವಾಗಿ ಇಂತಹ ಸೌಖ್ಯ ಲಭ್ಯವಾಗುತ್ತದೆ ಎಂದೆಲ್ಲ ನಿಯಮನಗಳನ್ನು - ಫಲಶ್ರುತಿಗಳನ್ನು ಹೇಳಿದರು ಶಾಂತಿ ಸೌಹಾರ್ದಗಳನ್ನು ಹೆಚ್ಚಿಸುತ್ತ, ಹಿಂಸೆ, ಕ್ರೌರ್ಯಗಳನ್ನು ದೂರಮಾಡುತ್ತ ಸಮಷ್ಟಿಯ ಅಭಿವೃದ್ಧಿಯತ್ತ ಸಾಮಾಜಿಕ ಸದ್ಭಾವದತ್ತ ಮನುಷ್ಯನ ಶಕ್ತಿಗಳು ಕೇಂದ್ರೀಕೃತವಾಗಿ ಅಭ್ಯುದಯದ ಹಾದಿಯಲ್ಲಿ ಪ್ರತಿಯೊಬ್ಬರೂ ಮುಂದುವರೆಯಬೇಕೆಂಬ ಅಪೇಕ್ಷೆಯೇ ಎಲ್ಲ ಆಚಾರ ಸಂಹಿತೆಯ ತಿರುಳು ಎಂಬುದನ್ನು ತಿಳಿಯುವುದು ಕಷ್ಟವೇನಿಲ್ಲ

ದೀಪಾವಳಿ ಹಬ್ಬ ಬರುತ್ತಿದೆ ನರಕ ಚತುರ್ದಶಿ, ಅಮಾವಾಸ್ಯೆ, ಬಲಿಪಾಡ್ಯಮಿ, ಯಮ ದ್ವಿತೀಯಾಗಳು - ನಾಲ್ಕು ದಿನ ಆಚರಣೆ ಹೊಂದುವ ಒಂದು ಉತ್ಸವದ ಸಾಲು ಎಂದೂ ಹೇಳಬರುತ್ತದೆ ನರಕ ಚತುರ್ದಶಿಯಂದು ನರಕಾಸುರ ನಿಯಂತ್ರಣವಾಯಿತು ಎಂದರು ಹಾಗೆಯೇ ಬಲಿನಿಗ್ರಹವಾದದ್ದೂ ಬಲಿಪಾಡ್ಯಮಿಯ ದಿನದಂದು ಎಂದು ಹೇಳಲಾಯಿತು ನರಕಾಸುರ ಹದಿನಾರು ಸಾವಿರ ರಾಜಕುವರಿಯರನ್ನು ಸೆರೆಯಲ್ಲಿಟ್ಟಿದ್ದು, ಅವರಲ್ಲಿ ತ್ವಷ್ಟೃವಿನ ಮಗಳು ಚತುರ್ದಶಿಯೂ ಒಬ್ಬಳು ಜ್ಞಾನದ ಪ್ರತೀಕ ಆಕೆ ಆಕೆ ಸೆರೆಯಲ್ಲಿದ್ದದ್ದರಿಂದ ಲೋಕವೆಲ್ಲ ತಮದಲ್ಲಿ ಮುಳುಗಿದಂತೆ ಆಗಿದ್ದಿತು. ಶ್ರೀಕೃಷ್ಣ ಈ ಜ್ಞಾನದ ಆವರಣವನ್ನು - ಬಂಧನವನ್ನು - ಸೆರೆಯನ್ನು ಕಳೆದ, ಲೋಕಕ್ಕೇ ದೆಳಕುಂಟಾಯಿತು ಹಾಗಾಗಿಯೇ ಇದು ದೀಪಗಳ ಹಬ್ಬವಾಯಿತು ಜ್ಞಾನದ ವ್ಯಾಪ್ತಿ ಹೆಚ್ಚಾಯಿತು ಆನಂದದ - ಕಾಂತಿ ಹೆಚ್ಚಾಯಿತು ಹಾಗಾಗಿ ನರಕಚತುರ್ದಶಿ ಸುಖವನ್ನು ಉತ್ಸಾಹವನ್ನು ತಂದುಕೊಡುವ ಹಬ್ಬವಾಯಿತು

ನಂತರ ಅಮಾವಾಸ್ಯೆ ಅಮಾವಾಸ್ಯೆಯಂದು ಪಿತೃಗಳಿಗೆ ತರ್ಪಣ ನೀಡಿ ಅವರನ್ನು ತೃಪ್ತಿ ಪಡಿಸಲಾಗುತ್ತದೆ ಇದರಿಂದಾಗಿಯೇ ಹಿಂದಿನ ದಿನ ಚತುರ್ದಶಿಯಂದು ದೀಪ ದೆಳಗಿಸಿ ಪಿತೃಗಳಿಗೆ ಆಕಾಶಮಾರ್ಗವನ್ನು ತೋರಿಸಲಾಗುತ್ತದೆ ಎಂಬ ಹಿನ್ನೆಲೆಯೂ ಉಂಟು ಆದರೂ ಇಲ್ಲಿ ಲಕ್ಷ್ಮೀಪೂಜೆಯೂ ನಡೆಯುತ್ತದೆ ಇದು ಲೆಕ್ಕಪತ್ರಗಳ ಮೊದಲದಿನ ಬಲಿಯನ್ನು ತುಳಿದ ಮೇಲೆ ಸ್ವಾಮಿಯೂ ಅವನ ಬಾಗಿಲ ಬಂಟನಾಗಿ ಪಾತಾಳ ಸೇರುವಂತಾಗಿ ಇಂದು ಲಕ್ಷ್ಮಿಸ್ವಾಮಿಯ ಭೇಟಿ ನಡೆಯುವ ದಿನ ಎಂದೂ ಹೇಳುವುದುಂಟು ಬಲಿಯ ಕಥೆಯೆಂದ ಮೇಲೆ ಅವನು ಪಾತಾಳಗತನಾಗಲು ಕಾರಣ ಆ ಒಂದು ದೈತ್ಯಾಹಂಕಾರ ನಿಗ್ರಹಗಳೆಲ್ಲ ಬಲಿಪಾಡ್ಯಮಿಯಂದು ನೆನಪಿಗೆ ಬರುವುದುಂಟು. ಬಲಿ ಭೂಮಿಯನ್ನು ಸಂದರ್ಶಿಸುವ ದಿನ ಇದು ಎಂದೂ ಹೇಳುವರು ಹೀಗೆ ಬಲಿನಿಗ್ರಹವನ್ನು - ಆ ನಿರುಮ್ಮಳತೆಯನ್ನು ಹಂಚಿಕೊಂಡು ಸಂತಸ ಪಡುವ ದಿನವಾಗಿ ಇದು ಮುಖ್ಯವಾಗುತ್ತದೆ ಯಮ ಸಂಯಮಿನೀಪುರದಧಿಪತಿಯಾಗಿ ನರಕಾಧಿಪತಿಯಾಗಿ ಧರ್ಮನಿರ್ಣಯ ಕಾರನಾದ ಆ ಕಾರಣದಿಂದ ಯಮಿ ಅವನಿಗೆ ಭೋಜನ ನೀಡಿ ಸೋದರನ ಸಂತಸವನ್ನು ಹಂಚಿಕೊಂಡಳು ಹಾಗಾಗಿ ಸೌಭ್ರಾತೃತ್ವವನ್ನು ಪಸರಿಸುವ ದಿನವೂ ಆಯಿತು

ಈ ಎಲ್ಲ ಕಾರಣಗಳಿಂದಾಗಿ ದೀಪಾವಳೀ ಹಬ್ಬ ಪ್ರಮುಖವಾಗುತ್ತದೆ ಹಿಂಸೆ ಕ್ರೌರ್ಯ ಅಹಂಕಾರಗಳಿಗೆ ತರ್ಪಣವಿತ್ತು - ಪ್ರೀತಿ, ಉತ್ಸಾಹ, ಮಮಕಾರಗಳನ್ನು ದೆಳೆಸಿಕೊಂಡು ಸರ್ವತೋಮುಖ ಅಭಿವೃದ್ಧಿಯತ್ತ ಸಮಾಜ ಪುರುಷ ನಡೆಯಲಿ ಎಂಬ ಸದಾಶಯವನ್ನು ಈ ಹಬ್ಬದ ಹಿನ್ನೆಲೆಯಲ್ಲಿ ಕಂಡರೆ ಅದು ಅಸಂಗತವೂ ಆಗದು, ಅಕಾಲಿಕವೂ ಆಗದು ಹಾಗಾಗಿ ಹಬ್ಬದ ಹಿರಿಮೆ ಹೆಚ್ಚಿ ನಮ್ಮಲ್ಲಿನ ಸಂಕೋಚಗಳು ದೂರವಾಗಲಿ, ಸೌಹಾರ್ದ ಸೌಭ್ರಾತೃತ್ವ ಸಿದ್ಧಿಸಲಿ ಎಂದು ದೀಪಾವಳೀ ಆಸ್ಥಾನದಲ್ಲಿ ಓಲಗ ನೀಡುವ ಶ್ರೀ ವೆಂಕಟೇಶ್ವರಸ್ವಾಮಿಯಲ್ಲಿ ಪ್ರಾರ್ಥಿಸುವ

# ದಶಾವತಾರ

- ಎಂ. ಆರ್. ನರಸಿಂಹನ್.

ಶ್ರೀವೈಷ್ಣವ ಆಚಾರ್ಯ ಪರಂಪರೆಯಲ್ಲಿ ಸಂಸ್ಕೃತ ಸ್ತೋತ್ರ ರಚನೆಯಲ್ಲಿ ಅದ್ವಿತೀಯ ಸಿದ್ಧಿ ಪರಾಶರ ಭಟ್ಟರದ್ದು ಇವರ ತಂದೆ ರಾಮಾನುಜರ ಆಪ್ತ ಶಿಷ್ಯ ಕೂರೇಶರು ಅವರ ಸಂಸ್ಕೃತ ಸಾಹಿತ್ಯ ಪ್ರತಿಭೆ ಅನ್ಯಾದೃಶವಾದ್ದು. ಈ ತಂದೆ ಮಕ್ಕಳ ಸ್ತೋತ್ರಮಾರ್ಗದಲ್ಲಿ ಯಾರ ವೈದುಷ್ಯ ಹೆಚ್ಚಿನದು ಎಂದು ನಿರ್ಣಯಿಸಲು ಯಾರಾದರೂ ಪ್ರಯತ್ನಿಸಿದರೆ ಅವರು ಅಪಹಾಸ್ಯಕ್ಕೆ ಈಡಾಗುವರೇ ವಿನಃ ತಮ್ಮ ಪ್ರಯತ್ನದಲ್ಲಿ ಯಶಸ್ಸನ್ನೋ ಸಾಫಲ್ಯವನ್ನೋ ಖಂಡಿತ ಗಳಿಸಲಾರರು ಅಂತಹ ಅನುಪಮ ವಿದ್ವದ್ವರರು ಈ ಈರ್ವರು ಕೂರೇಶರ ಪಂಚಸ್ತವಗಳು ಎಷ್ಟು ಆದರಣೀಯವೋ ಅಷ್ಟೇ ಮನ್ನಣೆಯನ್ನು ಗಳಿಸಿವೆ - ಪರಾಶರ ಭಟ್ಟರ ಮೇರು ಕೃತಿಗಳು ಎನಿಸಿದ ಶ್ರೀ ಗುಣರತ್ನಕೋಶ ಮತ್ತು ಶ್ರೀರಂಗರಾಜಸ್ತವಗಳು ಶ್ರೀರಂಗರಾಜಸ್ತವದಲ್ಲಿ ಭೂವೈಕುಂಠವೆನಿಸುವ ಶ್ರೀರಂಗಕ್ಷೇತ್ರ ವೈಭವವನ್ನೇ ನಮ್ಮ ಕಣ್ಣ ಮುಂದೆ ನಿಲ್ಲಿಸುವ ಭಟ್ಟರು, ಅದರ ಅಧಿದೈವ ಶ್ರೀರಂಗನಾಥನ ಗುಣವಿಭವೈಶ್ವರ್ಯಾದಿಗಳನ್ನು ಕಾರುಣ್ಯ ಸೌಲಭ್ಯ ಸೌಶೀಲ್ಯ ಗುಣಗಣಗಳನ್ನು ನಮ್ಮ ಹೃದಯವನ್ನು ತಟ್ಟುವಂತೆ ಮನದಟ್ಟು ಮಾಡಿಸಿ ಆದರಕ್ಕೆ ಪಾತ್ರರಾಗಿದ್ದಾರೆ ಧರ್ಮ ಸಂಸ್ಥಾಪನೆಗಾಗಿಯೂ, ಲೋಕಕಲ್ಯಾಣಾರ್ಥವಾಗಿಯೂ, ದುಷ್ಟಶಿಕ್ಷಣಾರ್ಥವಾಗಿಯೂ ಮಹಾವಿಷ್ಣುವು ಕೈಕೊಂಡ ಅವತಾರಗಳ ವೈಲಕ್ಷಣ್ಯಗಳನ್ನು ಈ ಕೃತಿಯಲ್ಲಿ ಹೃದಯಂಗಮವಾಗಿ ಉತ್ತರ ಶತಕದ ಅರವತ್ತನೆಯ ಶ್ಲೋಕದಿಂದ ತೊಡಗಿ ಎಪ್ಪತ್ತೂರನೆ ಶ್ಲೋಕದವರೆಗೂ ಎಂದರೆ ಹದಿನಾಲ್ಕು ಶ್ಲೋಕದಲ್ಲಿ ವಿವರಿಸಿರುವ ರೀತಿ ಅನುಬವೈಕ ವೇದ್ಯ ಅನುಸಂದೇಯ ಆದ್ದರಿಂದಲೇ ಆಸ್ತಿಕರ ಅವಲೋಕನಕ್ಕೆಂದು ಈ ಭಾಗವನ್ನೇ ಬೇರೆಯಾಗಿ ಉದ್ಧರಿಸಿ ದಶಾವತಾರ ಸ್ತೋತ್ರವೆಂದು ಹೆಸರಿಸಿ ಲಘುತಾತ್ಪರ್ಯದೊಂದಿಗೆ ಈ ಕೆಳಗೆ ಕಾಣಿಸುತ್ತಿದ್ದೇನೆ

ಮೀನ ತನುಸ್ಸಂ, ನಾವಿ ನಿಧಾಯ,
ಸ್ಥಿರ ಚರ ಪರಿಕರ ಮನುಮನು ಭಗವನ್
ವೇದ ಸನಾಭಿಃ, ಸ್ಟೋಕ್ತಿ ವಿನೋದ್ಯೈಃ,
ಅಕಲಿತಲಯಭಯ ಲವಂ ಅಮೂಮವಪುಃ

ಮತ್ಸ್ಯಾವತಾರವನ್ನು ಆಕರ್ಷಕ ಮಟ್ಟಿನಲ್ಲಿ ವಿಲಕ್ಷಣವಾಗಿ ತಮ್ಮದೇ ಆದ ವಿಧಾನದಲ್ಲಿ ಸಂಕೀರ್ತಿಸಿದ್ದಾರೆ

ಎಲೈ ಭಗವಂತನೆ! ಮೀನಿನ ಶರೀರ ಧರಿಸಿ ಸತ್ಯವ್ರತನೆಂಬ ಭಕ್ತ ಮನುರಾಜನನ್ನು ಅನುಗ್ರಹಿಸಲು ಹಡಗೊಂದರಲ್ಲಿ ಆತನನ್ನೂ ಆತನ ಸಂಗಡ ಸ್ಥಾವರ ಜಂಗಮ ವಸ್ತುಗಳನ್ನು ನೆಲೆಗೊಳಿಸಿ ನೀನು ಹಡಗಿನ ಚಾಲನೆ ಮಾಡಿಕೊಂಡು, ವಿನೋದ ಸಂಕಥನದೊಂದಿಗೆ ಆತನಿಗೆ ಪ್ರಳಯಾಬ್ಧಿಯ ಭಾವನೆಯೇ ಏರ್ಪಡದಂತೆ ಕಾಪಾಡಿದೆಯಲ್ಲವೆ? ನಿನ್ನ ಮಹಿಮೆ ಸಾಧಾರಣವಾದದ್ದೇನು?

ಶ್ರೀ ನಯನಾಭೋದ್ಭಾಸುರ ದೀರ್ಘ
ಪ್ರವಿಪುಲ ಸುರಚಿರ ಶುಚಿ ಶಿಶಿರವಪುಃ
ಪಕ್ಷನಿಗೀರ್ಣೋದ್ಗೀರ್ಣ ಮಹಾಬ್ಧಿಃ
ಸ್ಥಲಜಲ ವಿಹರಣರತಗತಿ ರಚರಃ

ಮೊದಲಿನ ಶ್ಲೋಕದ ವಿವರಣಯಿಂದ ದಣಿಯದ ಅವರ ಮನಸ್ಸಿನಿಂದ ಈ ಶ್ಲೋಕವು ಮತ್ತಷ್ಟು ಧ್ವನಿಪೂರ್ಣವಾಗಿ ಹೊರಹೊಮ್ಮಿವೆ ಈ ಶ್ಲೋಕಗಳಿಗೆ ಆರಿಸಿರುವ ವೃತ್ತವೂ ಅಷ್ಟೇ ಚೇತೋಹಾರಿಯಾಗಿದೆ

ಎಲ್ಯ ದೇವನೇ! ಶ್ರೀದೇವಿಯ ನೇತ್ರ ಸೌಂದರ್ಯದಂತಯೋ ನಿನ್ನ ರೂಪ ಅದ್ವಿತೀಯವೆನಿಸಿದ (ಆಕೆ ಮೀನಿನಂತೆ ಕಣ್ಣುಳ್ಳವಳು ನೀನೋ ಮೀನಿನ ರೂಪಧಾರಣ ಮಾಡಿದವನು) ದೀರ್ಘವೂ, ವಿಶಾಲವೂ, ಮನೋಹರವೂ, ನಿರ್ಮಲವೂ, ತಂಪಿಂದ ಕೂಡಿರುವುದೂ ಆಗಿವೆ ನಿನ್ನ ದಿವ್ಯ ಶರೀರ - ಎಂದರೆ ಅದೇ ನಿನ್ನ ಮೀನ ಮಹದಾಕೃತಿ ನೀನೋ ಸಮುದ್ರದ ನೀರೆಲ್ಲವನ್ನೂ ನಿನ್ನ ದೇಹದ ಗರಿಗಳ ಮೂಲಕ ಒಳಕ್ಕೆ ಎಳೆದುಕೊಂಡಾಗ ನೀರೇ ಇಲ್ಲದಂತಾಗಿ ಬರಿಯ ನೆಲವೇ ಕಾಣುವುದು ಮತ್ತೆ ನಿನ್ನ ಗರಿಯ ಮೂಲಕ ನೀರನ್ನು ಹೊರಕ್ಕೆ ಚೆಲ್ಲುವೆ ಆಗ ಸುತ್ತಲಿನ ಆವರಣವೆಲ್ಲ ಜಲಮಯವಾಗುವುದು ಇಂತಹ ಅಭೂತಪೂರ್ವಶಕ್ತಿ ನಮ್ಮ ಮೈರೋಮಾಂಚನಗೊಳಿಸುತ್ತದೆ ಈ ವೈಭವ ನಿನಗಲ್ಲದೆ ಮತ್ತಾರಿಗುಂಟು? ಖಂಡಿತ ಬೇರೆಯವರಿಗೆ ಅಸಾಧ್ಯ ಇದೇ ಮಹಾಮತ್ಸ್ಯನೆನಿಸಿದ ನಿನ್ನ ವಿಲಕ್ಷಣ ವೈಭವ!



ನಿಜಕ್ಕೂ ಭಟ್ಟರ ಕವಿಸಮಯ ಅದ್ಭುತವಾದದ್ದು ಈ ಮಹಾಮತ್ಸ್ಯದ ಚಿತ್ರಣವನ್ನು ನೀವು ಕಲ್ಪಿಸಿಕೊಳ್ಳಬಲ್ಲಿರಾ? ಪ್ರಳಯ ಆವೃತವಾಗಿ ಆಕಾಶ ನೀರೆಲ್ಲ ಒಂದಾಗಿರುವಾಗ ವಿಶ್ವವನ್ನೇ ಆಕ್ರಮಿಸಿರುವ ಮಹಾ ಮೀನಿನ ಶರೀರದ ವಿಸ್ತಾರವ್ಯಾಪ್ತಿ ಹೇಗಿರುತ್ತದೆ! ಈ ಎಲ್ಲವನ್ನು ಆವರಿಸಿರುವ ಮೂರ್ತಿ ತಾನೇ ಭಗವಂತ! ವಿರಾಟ್ ರೂಪಿ!

ಚಕರ್ತ ಶ್ರೀರಂಗಿನ್ ನಿಖಿಲ
ಜಗದಾಧಾರ ಕಮಠೋ
ಭವನ್ ಧರ್ಮಾನ್ ಕೂರ್ಮಃ
ಪುನರಮೃತ ಮಂಥಾ ಚಲಧರಃ
ಜಗಂಥ ಶ್ರೇಯಸ್ತಂ
ಮರಕತ ಶಿಲಾ ಪೀಠಲಲಿತೋ
ಜಲಾದುದ್ಯಲ್ಲಕ್ಷ್ಮೀ
ಪದಕಿಸಲಯ ನ್ಯಾಸಸುಲಭಂ

ಇಲ್ಲಿ ಕೂರ್ಮಾವತಾರದ ವರ್ಣನೆ ಇದೆ ಈ ಶ್ಲೋಕದ ವೃತ್ತ ಬಂಧ ಬೇರೆ ಇದರ ಅರ್ಥ ಸ್ವಾರಸ್ಯ ಇಂತಿದೆ

తిరుమల తిరుపతి దేవస్థానములు, తిరుపతి.

సందర్శించి.  ఆనందించి.

# శ్రీ కరియ మాణిక్యస్వామి ఆలయ నగరి

తిరుపతి - తిరుత్తణి మార్గంలో తిరుపతియింద నలవత్తు కిలోమీటర్ దూరదల్లిరువ కుశస్థలీ నదీతీరద నగరి గ్రామదల్లి శ్రీ మహావిష్ణువు భక్తర పాలిన చింతామణియాగి, బేడికెగళ సల్లిసువ భగవంతనాగి భక్తరిగె ప్రత్యక్షదైవవాగి శ్రీదేవి భూదేవి సమేతనాగి శ్రీ కరియ మాణిక్యస్వామియ హెసరినల్లి ఓలగ నీడుత్త త్రికాలపూజెగళన్ను పడెయుత్త ప్రకటవాగిద్దానె.

అత్యంత ప్రాచీనవాద ఈ ఆలయదల్లి భక్తర పాలిగె అంగైయ నెల్లికాయి ఆద శ్రీ కరియ మాణిక్యస్వామియవరిగె ప్రతిశుక్రవారవే అల్లదె ప్రతి శ్రవణ నక్షత్ర దినదందు, ప్రతి ఏకాదశియందు అభిషేక అర్చనెగళు విశేషవాగి నడెయుత్తవె.

ప్రతి వర్షద రథసప్తమియందు స్వామియ కల్యాణోత్సవ వైభవదింద నడెయుత్తదె.

దివ్యాను భూతియన్ను నీడువంతహ ఈ స్థళవన్ను తిరుపతియ యాత్రికరు దర్శిసి స్వామియ అనుగ్రహవన్ను పడెయబేకెందు ప్రార్థనె.

తిరుపతియింద ప్రతి హదినైదు నిమిషక్కె నగరిగె బస్ సౌకర్యవిదె.

తావూ బన్ని. తి.తి.దే. తమ్మవరన్నూ కరెతన్ని.

ಎಲೈ ಶ್ರೀರಂಗನಾಥನೆ! ಸಮುದ್ರಮಥನ ಕಾಲದಲ್ಲಿ ಬೆನ್ನ ಮೇಲೆ ಮಂದರಪರ್ವತವನ್ನು ಸಮುದ್ರದಲ್ಲಿ ಮುಳುಗದಂತಿರಲು ಹೊತ್ತೆಯಲ್ಲವೆ - ಎಂದರೆ ಎಲ್ಲಕ್ಕೂ ಆಧಾರವಾಗಿ ಧರ್ಮವನ್ನು ಮೇಲೆತ್ತಿ ನಿಲ್ಲಿಸಿದಂತಾಯಿತು ತಾನೆ - ಎಂದರೆ ನಿನ್ನ ಬೆನ್ನ ಮೇಲೆ ಧರ್ಮ ನಿಂತಿತು! ಆದರಿಂದಲೇ ಕೂರ್ಮಪೀಠದ ಮೇಲೆ ಧರ್ಮದ ಅನುಸಂಧಾನ ಇಂದಿಗೂ ನಡೆಸುವುದು ಎಲ್ಲರೂ! ಅಮೃತಮಥನ ಸಂದರ್ಭದಲ್ಲಿ ಉದಿಸಿ ಬಂದ ಸಾಗರ ಕನ್ಯೆ ಲಕ್ಷ್ಮಿಯು ನಿನ್ನ ಬೆನ್ನ ಮೇಲೆ ತಾನೆ ಪಾದವನ್ನು ಊರಿಕೊಂಡು ಮೇಲೆ ಬಂದದ್ದು! ಎಂದಾಗ ನಿನ್ನ ಬೆನ್ನು ಅವಳಿಗೆ ಅವಳ ಉದಯಕ್ಕೆ (ಅಭ್ಯುದಯಕ್ಕೆ) ಕಾರಣ - ಆಧಾರ ಭೂತವಾದಂತಾಯಿತಲ್ಲವೆ! ಶ್ರೀ ಎಂದರೆ ಸಮೃದ್ಧಿ, ಸುಖ, ಸಂತೋಷ, ಸಂಪತ್ತು. ಸಂಪತ್ತು ಎಂದಾಗ ಕೇವಲ ಐಶ್ವರ್ಯ ಎಂದಲ್ಲ ಅರ್ಥ. ಎಲ್ಲರನ್ನೂ ತೃಪ್ತಿಪಡಿಸುವ ಸಾಧನ ಸಂಪತ್ತು, ಈ ಸಂಪತ್ತು - ಸಮೃದ್ಧಿ, ಸುಖ, ಸಂತೋಷ ಎಲ್ಲಕ್ಕೂ ನೀನೇ ಮೂಲಾಧಾರ. ಅವುಗಳನ್ನು ನೀನು ಬೆನ್ನಲ್ಲಿ ಮೇಲೆತ್ತಿ ಲೋಕಕ್ಕೆ ಲೋಕಹಿತಕ್ಕೆ ನೀಡಿದಂತಾಯಿತು ಅಲ್ಲವೆ ಅಂತಹ ಕರುಣಾಸಾಗರ ನೀನು ಎಂಬ ಈ ವ್ಯಾಖ್ಯಾನ ಅದ್ಭುತವಾಗಿ ಕೂರ್ಮಾವತಾರದ ಚಿತ್ರಣವನ್ನು ದರ್ಶನ ಮಾಡಿಸಿದೆ. ಭಟ್ಟರ್ ಅವರ ಕಥನ ಕೌಶಲದಿಂದ ವರಹಾವತಾರದ ವರ್ಣನೆ ಮತ್ತೊಂದು ತೆರನಾದದ್ದು. ಈ ಸ್ತೋತ್ರವೃತ್ತ ಬೇರೆಯ ತೆರನಾದದ್ದು.

ಹೃದಿಸುರರಿಪೋರ್ದಂಷ್ಟ್ರೋ
ತ್ಪಾತೇಕ್ಷಿಪಸ್ ಪ್ರಲಯಾರ್ಣವಂ
ಕ್ಷಿತಿಕುಚ ತಟೀ ಮರ್ಚನ್
ದೈತ್ಯಾಸ್ರ ಕುಂಕುಮ ಚರ್ಚಯಾ
ಸ್ಫುಟಿಘುತ ಸಟಾಭ್ರಾಮ್ಯತ್-
ಬ್ರಹಸ್ಪವೋಸ್ಸುಖ ಬೃಂಹಿತಃ
ಶರಣಮಸಿ ಮೇ ರಂಗಿನ್
ತ್ವಂ ಮೂಲ ಕೋಲ ತನುರ್ಭವನ್

ಶ್ರೀರಂಗನಾಥನೇ! ನೀನು ದೇವತೆಗಳ ಶತ್ರುವಾದ ಹಿರಣ್ಯಾಕ್ಷನ ಎದೆಯನ್ನು ನಿನ್ನ ಕೋರೆಯ ಹಲ್ಲುಗಳಿಂದ ಬಗೆದು ಆಳವಾದ ಹಳ್ಳವನ್ನೇ ನಿರ್ಮಿಸಿ ಅದರಲ್ಲಿ ಪ್ರಳಯ ಪಯೋಧಿಯನ್ನೇ ತುಂಬಿ ಕುಣಿದಾಡಿದೆಯಲ್ಲವೆ? ಆ ಅಸುರನ ದೇಹದ ರಕ್ತವೆಂಬ ಕುಂಕುಮ ಲೇಪದಿಂದ

ಭೂದೇವಿಯ ವಕ್ಷಸ್ಥಳವನ್ನು ಅಲಂಕರಿಸಿದೆಯಲ್ಲವೆ? ಎಂದರು ಭಟ್ಟರು. ಇದು ಹೇಗೆ ಎಂದರೆ ಇಲ್ಲೊಂದು ಶೃಂಗಾರಭಾವ ಮಿನುಗಿದೆ. ರಾಕ್ಷಸನ ರಕ್ತದ ಓಕುಳಿಯಿಂದ ವರಾಹದೇವನ ವಕ್ಷಸ್ಥಳ ಆವೃತವಾಗಿದೆ. ವಿಜಯಶಾಲಿಯಾದ ದೈವ ತನ್ನ ಮನೋವಲ್ಲಭೆಯ ಕಡೆ ತಿರುಗಿ ವಿಜಯೋತ್ಸಾಹದ ಮಂದಹಾಸದಿಂದ ಆಕೆಯನ್ನು ಈಕ್ಷಿಸುತ್ತಾನೆ. ತನಗೆ ಬಂದಿದ್ದ ಕುತ್ತನ್ನು ಪಾರುಮಾಡಿದ್ದರಿಂದ ವಿಷ್ಣು ಪತ್ನಿಯಾದ ಭೂದೇವಿಯು ತನ್ನ ಇನಿಯನನ್ನು ಕೃತಜ್ಞತಾರೂಪದಿಂದ ಆಲಿಂಗಿಸಿಕೊಳ್ಳುತ್ತಾಳೆ. ಆತನ ವಕ್ಷಸ್ಥಳಕ್ಕೆ ಆಗಿದ್ದ ರಕ್ತಲೇಪನ ಆಕೆಯ ವಕ್ಷಸ್ಥಳಕ್ಕೂ ಆವರಿಸುತ್ತದೆ. ಈ ರೀತಿಯ ವಿಜೃಂಭಣೆಯಿಂದ ಮೆರೆದ ದೇವ ತನ್ನ ಮೈಮೇಲಿನ ರೋಮಗಳನ್ನು ಸೆಟೆಸಿ ಒಮ್ಮೆಗರ್ವದಿಂದ ಮೈಯ್ಯನ್ನು ಅಲ್ಲಾಡಿಸಲು ಆ ರೋಷೋನ್ಮಾದವನ್ನು ಕಂಡ ಬ್ರಹ್ಮನು ಕಂಗೆಟ್ಟು ಥರಥರನೆ ನಡುಗಿ ನಮಸ್ಕರಿಸಿ ಕೋಪೋಪಶಮನಾರ್ಥವಾಗಿ ವರಾಹದೇವನನ್ನು ಸ್ತೋತ್ರಮಾಡಲುಪಕ್ರಮಿಸಿದನಂತೆ. ಅದರಿಂದ ಸಂತುಷ್ಟನಾಗಿ ಪರಮಾತ್ಮನು ತನ್ನ ಕಂಠದಿಂದ ವರಾಹರೂಪಿಗೆ ಸಹಜವಾದ ಘರ್ಘರ ರವವನ್ನು ಹೊರಹೊಮ್ಮಿಸಿ ಎಲ್ಲರಿಗೂ ಆನಂದ ನೀಡಿದನಂತೆ. ಅಂತಹ ಸ್ವಾಮಿ ಸಕಲರನ್ನೂ ಪೊರೆಯಲಿ ಎಂದು ಭಟ್ಟರು ಹಾರೈಸಿದ್ದಾರೆ. ಇಂತಹ ರಮ್ಯಚಿತ್ರಣ ನಮ್ಮ ಮನಸ್ಸಿನಿಂದ ಎಂದಿಗೂ ಮಾಯವಾಗುವುದಿಲ್ಲ ಈ ವರ್ಣನೆಗೆ ಸರಿಯೋ ಮಿಗಿಲೋ ಎಂಬಂತೆ ನರಸಿಂಹಾವತಾರದ ವರ್ಣನೆ ಮುಂದಿನ ಶ್ಲೋಕದಲ್ಲಿ ಕಾಣಸಿಗುತ್ತದೆ.

ನೃಹರಿದಶಯೋಃ
ಪಶ್ಯನ್ಸೌತ್ರತ್ರಿಕಂ ಘಟನಾದ್ಭುತಂ
ನರಮುತ ಹರಿಂ ದೃಷ್ಟ್ವೈ
ಕೈಕಂ ಸಮುದ್ವಿಜ ತೇಜಸಂ
ಇತಿಕಿಲಸಿತಾ ಕ್ಷೀರನ್ಯಾಯೇನ
ಸಂಗಮಿತಾಂಗ ಕಂ
ಸ್ಫುಟಸಟಿಮಹಾದಂಷ್ಟ್ರಂ
ರಂಗೇಂದ್ರ ಸಿಂಹ ಮುಪಾಸ್ಮಹೇ

ಮನುಷ್ಯತ್ವ ಮತ್ತು ಸಿಂಹತ್ವ ಈ ಎರಡೂ ಒಂದೇ ದೇಹದಲ್ಲಿ ಸೇರ್ಪಡೆ ಹೊಂದಿ ವಿಜೃಂಭಿಸಿ ಭಕ್ತಾಭೀಷ್ಟಪ್ರದನಾಗಿ ಮೆರೆಯುವ ಈ ಪ್ರಭು ನಿಜಕ್ಕೂ ಆಶ್ಚರ್ಯಕರನಾದವನು. ಈ ರೂಪವನ್ನು ಕಂಡು ಆನಂದಿಸಿದ ಜನರಿಗೆ ಮನುಷ್ಯರೂಪವೋ ಅಥವಾ ಬರಿಯ ಸಿಂಹವೋ ಕಂಡಾಗ ತಾತ್ಸಾರ ಉದಾಸೀನ ಏರ್ಪಡುವುದು ಸಹಜವೇ. ಅದನ್ನರಿತೇ ವಿಷ್ಣುವು ಮೊದಲೇ ಸಕ್ಕರೆಯನ್ನೂ ಹಾಲನ್ನೂ ಸೇರಿಸಿದರೆ ಸವಿಯು ಮತ್ತಷ್ಟು ಸ್ವಾದಿಷ್ಟಗೊಳ್ಳುವಂತೆ ಈ ಎರಡು ರೂಪವನ್ನೂ ತನ್ನಲ್ಲಿ ಸೇರಿಸಿಕೊಂಡನು. ಜೊತೆಗೆ ಕೇಸರ ಮತ್ತು ಕೋರೆಹಲ್ಲಿಂದ ಮೆರೆದ ಶ್ರೀರಂಗಪ್ರಭುವಿಗೆ ಸಾಟಿಯುಂಟೇ? ಎಂದಿದ್ದಾರೆ ಭಟ್ಟರು.

ಈ ಹೋಲಿಕೆಯಿಂದ ತೃಪ್ತಿಹೊಂದದೇ ಅವರು ಇನ್ನೂ ಎರಡು ಶ್ಲೋಕಗಳಲ್ಲಿ ನೃಹರಿಯ ಮಹಿಮೆಯನ್ನು ಅದ್ಭುತವನ್ನು ಮನನೀಯವಾಗಿ ನೀಡಿರುವರು. ನರಸಿಂಹನ ಅವತಾರ ಭಟ್ಟರಿಗೆ ಆಕರ್ಷಣೀಯವಾಗಿ ಕಂಡಿರುವುದೇ ಇದಕ್ಕೆ ಕಾರಣವಿರಬೇಕು. ಶ್ರೀರಂಗದ ದೇಗುಲಲ್ಲಿನ ಮೇಟ್ಟಳಶಿಂಗರ್ ಸನ್ನಿಧಿ ಅವರ ಭಕ್ತಿಭಾವಕ್ಕೆ ಪ್ರಚೋದನಾದ್ರವ್ಯವಾಗಿದ್ದರೂ ಇದ್ದೀತು.

ದ್ವಿಪಾಣ ದ್ವೇಷೋದ್ಯನ್ನಯನ
ವನವಹ್ನಿ ಪ್ರಶಮನ
ಭ್ರಮಲ್ಲಕ್ಷ್ಮೀ ವಕ್ತ್ರ ಪ್ರಹಿತ
ಮಧು ಗಂಡೂಷ ಸುಷುಮ್ನೈಃ
ನಖಕ್ಷುಣ್ಣಾರಾತಿಕ್ಷತಜ
ಪಟಲೈ ರಾಪ್ಲುತ ಸಟಾ



ಚ್ಚಟಾಸ್ಕಂದೋರುಂಧೇ
ದುರಿತಮಿಹ ಪುಂಸ್ಟಂ ಚ ವದನಃ

ತನ್ನ ಆನತ ಜನರಿಗೆ ಬಾಧೆಯನ್ನುಂಟುಮಾಡಿದ ಹಿರಣ್ಯಕಶಿಪುವಿನ ಮೇಲೆ ಅಸಾಧ್ಯ ಕೋಪ ಏರ್ಪಡಲು ನರಸಿಂಹನ ಕಣ್ಣುಗಳು ಬೆಂಕಿಯೇ ಉಗುಳತೊಡಗಿತು ಅದನ್ನು ಶಾಂತಪಡಿಸಲು ಮಹಾಲಕ್ಷ್ಮಿಯೊಬ್ಬಳೇ ತಕ್ಕವಳು ಎಂದು ದೇವತೆಗಳು ಆಕೆಯನ್ನು ಮುಂದಕ್ಕೆ ಬಿಟ್ಟರು ಆಕೆಯನ್ನು ಕಂಡರೂ ಆ ನೃಹರಿಯ ಕೋಪ ಶಾಂತವಾಗದೇ ಹೋದಾಗ ಆಕೆಯ ಬಾಯಿಂದ ಆಕೆ ಮೆಲ್ಲುತ್ತಿದ್ದ ತಾಂಬೂಲದ ಗಂಡೂಷ (ಚರಟವು) ನರಸಿಂಹನ ಮುಖದ ಮೇಲೆ ಹಾರಿತು ಅದರಿಂದ ಆತನ ಕೇಸರವೆಲ್ಲ ಕೆಂಪುವರ್ಣಕ್ಕೆ ತಿರುಗಿತು ಇದು ಹಿರಣ್ಯಕಶಿಪುವಿನ ಎದೆ ಬಗೆದಾಗ ಹಾರಿದ ರಕ್ತದಿಂದ ಆವೃತವಾಗಿದ್ದ ಕೇಸರದೊಂದಿಗೆ ಸ್ಪರ್ಧೆ ಎಸಗಿತು. ಆಗ ಪರಮಾತ್ಮ ಶಾಂತನಾದ ಎನ್ನುವ ಭಾವ - ಇಲ್ಲಿ ರೌದ್ರ, ಶಾಂತ ಶೃಂಗಾರ ಭಾವಗಳು ಒಂದರೊಡನೊಂದು ಸ್ಪರ್ಧೆ ಎಸಗಿ ಶೃಂಗಾರದಿಂದ ಕೂಡಿದ ಶಾಂತಭಾವ ರೌದ್ರದ ಮೇಲೆ ಜಯ ಸಾಧಿಸುವ ಸಂಭ್ರಮದ ದೃಶ್ಯ ನಮಗೆ ಆನಂದವನ್ನು ನೀಡದೇ ಇರದು ಈ ಕವಿತಾ ಧೋರಣೆ, ಚಾತುರ್ಯವನ್ನು ನಮಗೆ ಪ್ರದರ್ಶಿಸಿ ಭಟ್ಟರು ಕವಿಸಾರ್ಥಕ್ಯ ಹೊಂದಿದ್ದಾರೆ

ನಖಾಗ್ರಗ್ರಸ್ತೇಪಿ ದ್ವಿಷತಿ
ನಿಜ ಭಕ್ತ ದ್ರುಹಿರುಷಃ
ಪ್ರಕರ್ಷಾದ್ವಿಷ್ಣುತ್ವಾ
ದ್ವಿಗುಣ ಪರಿಣಾ ಹೋತ್ಕಟ ತನುಃ
ವಿರುದ್ಧೇ ವೈಯಗ್ರೀ
ಸುಘಟಿತ ಸಮಾನಾಧಿಕರಣೇ
ನೃಸಿಂಹತ್ವೇ ಬಿಭ್ರದ್ವರದ
ಬಿಭರಾ ಮಾಸಿತ ಜಗತ್

ಮನುಷ್ಯನ ಗುಣ ಸಿಂಹದ ಗುಣ ಪರಸ್ಪರ ವಿರುದ್ಧವಾದದ್ದು. ಒಂದು ಸಾತ್ವಿಕ ಮತ್ತೊಂದು ರಾಜಸ ಅಥವಾ ತಾಮಸ - ಒಂದು ಶಾಂತವಾದರೆ ಮತ್ತೊಂದು ರೌದ್ರದ ಪರಮಾವಧಿ ಒಂದು ವಿವೇಕ ಮತ್ತೊಂದು ಅವಿವೇಕ, ಒಂದು ಗುಣವಾದರೆ ಮತ್ತೊಂದು ಅವಗುಣ. ಆದರೂ ತನ್ನನ್ನು ನಂಬಿದವರಿಗೆ ಇಂಬನ್ನು ನೀಡಲು ಪರಮಾತ್ಮ ಅರಿತೂ ಅರಿತು ಈ ಗುಣ ವೈರುಧ್ಯವನ್ನುಳ್ಳ ರೂಪವನ್ನು ಧಾರಣಮಾಡಿಕೊಂಡು ಸಮಾನಾಧಿಕರಣವನ್ನು ಸಂಸ್ಥಾಪಿಸಿ ಮೆರೆದನು. ಅಲ್ಲವೇನು? ಇಂತಹ ಸ್ವಾಮಿ ಹಿರಣ್ಯಕಶಿಪುವನ್ನು ಕೊಂದದ್ದಾದರೂ ಹೇಗೆ - ಕೇವಲ ನಖಾಗ್ರದಿಂದ! ಎಂತಹ ಕಿರಿದಾದ ಆಯುಧದಿಂದ ಮಹಾಸುರನನ್ನು ಸಂಹರಿಸಿ ಕೀರ್ತಿ ವೈಭವದಿಂದ ಈ ವಿಶ್ವವನ್ನೇ ಆಕ್ರಮಿಸಿಕೊಂಡ ಮಹಾರೂಪಿಯಾದ ವ್ಯಾಪಕತ್ವದಲ್ಲಿ ವಿಶ್ವವನ್ನೂ ಮೀರಿಸಿ ಬೆಳೆದ ವಿಷ್ಣುವಿಗೆ ಮೀರಿದವರು ಯಾರುಂಟು.

ಮಹಾನ್ ಆದಂತಹ ಪರಮಪುರುಷ ನಮ್ಮ ಸ್ವಾಮಿ ಎಂದು ವಿಸ್ಮಯಾವಿಷ್ಟರಾಗಿ ಭಟ್ಟರು ಸಂಭ್ರಮಿಸಿರುವ ಪ್ರಶಂಸೆ ನಿಜಕ್ಕೂ ಉಚಿತವಾದದ್ದೇ.

ಈ ರೀತಿ ಮೂರು ಶ್ಲೋಕಗಳಲ್ಲಿನ ಉಪಮೆಗಳು ಅದ್ಭುತವಾದದ್ದು. ಭಟ್ಟರ ಚಮತ್ಕಾರ ಬೆರಗುಗೊಳಿಸುವಂತಹುದು. ಇನ್ನು ವಾಮನಾವತಾರದ ವೈಭವವನ್ನು ನೋಡಬೇಕು.

ದೈತ್ಯೌದಾರ್ಯೇಂದ್ರಯಾಂಚಾ ವಿಹತಿ
ಮಪನಯನ್ ವಾಮನೋ
ಅರ್ಥಿಂ ತ್ವಮಾಸೀಃ
ವಿಕ್ರಾಂತೇ ಪಾದಪದ್ಮೇ ತ್ರಿಜಗದಣುಸಮಂ
ಪಾಂಸುಲೀ ಕೃತ್ಯಲಿಲ್ಯೇ
ನಾಭೀಪದ್ಮಸ್ಥಮಾಸ ಕ್ಷಮಮಿವ
ಭುವನ ಗ್ರಾಮಮನ್ಯಂ ಸಿಸೃಕ್ಷುಃ
ತಸ್ಥೌ ರಂಗೇಂದ್ರ ವೃತ್ತೇ ತವ ಜಯ
ಮುಖರೋ ಡಿಂಡಿಮ ಸ್ತತ್ರವೇದಃ

ಎಲೈ ರಂಗನಾಥನೇ! ನೀನು ವಾಮನನ ರೂಪಿನಿಂದ ದೈತ್ಯೇಂದ್ರನಾದ ಮಹಾಬಲಿಯ ಮಹದೌದಾರ್ಯವನ್ನೂ, ಇಂದ್ರನ ಯಾಚನೆಯನ್ನೂ ನಿಷ್ಫಲಗೊಳಿಸಲಿಚ್ಛಿಸಿದೆ. ಅವಕೆ ಒಂದು ಮಹತ್ವವನ್ನು ನೀಡುವ ದೃಷ್ಟಿಯಿಂದಲೇ ಬಲಿಯ ಬಳಿಗೆ ಯಾಚಕನಾಗಿ ಹೋದೆಯಲ್ಲವೆ? ನಂತರ ತ್ರಿವಿಕ್ರಮನಾಗಿ ಇಡೀ ವಿಶ್ವವನ್ನೇ ಆಶ್ರಯಿಸುವಂತೆ ಮಹಾವಪುವಾಗಿ ಮೆರೆದು ಅಳೆದಾಗ, ನಿನ್ನ ಹಿರಿದಾದ ಆಕೃತಿಗೆ ಮೂರು ಲೋಕಗಳೂ ಕಾಲಿಗೆ ಅಂಟಿಕೊಂಡ ಕಣದಂತೆ ತೋರಿತಲ್ಲವೆ? ಮತ್ತೂ ಆ ಕಣಗಳೂ ಪಾದಗಳಲ್ಲೇ ಲೀನಗೊಂಡಿತಲ್ಲವೇನು? ನಿನ್ನ ಮಹೋದರದ ಮಧ್ಯದ ನಾಭೀಕಮಲವು ಮತ್ತೊಂದು ಲೋಕ ಸಮೂಹವನ್ನೇ ಸೃಷ್ಟಿಸುವಂತೆ ಕಂಡುಬಂದಿತಲ್ಲವೆ? ಇಂತಹ ಅದ್ಭುತಾಕೃತಿಯ ನಿನ್ನ ಮಹಾವಪುವನ್ನು ಹೊಗಳಲು ಹೊರಟ ವೇದ ಸಾಹಿತ್ಯವು ಗಂಭೀರ ನಾದವನ್ನು ಹೊರಹೊಮ್ಮಿಸುವ ಡಿಂಡಿಮಸ್ವರದಂತೆ ಲೋಕವನ್ನು ಆಕ್ರಮಿಸಿತು. ಅದ್ಭುತವೇ ನಿನ್ನ ವ್ಯಾಪಾರ - ಎಂದು ಬೆರಗಾಗಿ ಸ್ತುತಿಸುತ್ತಾರೆ ಭಟ್ಟರು.

ಭವಾನ್ ರಾಮೋಭೂತ್ವಾ
ಪರಶು ಪರಿಕರ್ಮಾ ಭೃಗುಕುಲಾತ್
ಅಲಾವೀದ್ಭೂಪಾಲಾನ್ ಪಿತೃಗಣ
ಮತಾರ್ಪ್ಸೀತ್ ತದಸೃಜಾ
ಭುವೋ ಭಾರಾಕ್ರಾಂತಂ
ಲಘುತಲಮುಪಾಚೀ ಕ್ಲಪದಿತಿ
ದ್ವಿಷಾಮುಗ್ರಂ ಪಶ್ಯೋಪ್ಯನಘ
ಮಮ ಮಾಜೀಗಣದಘಮ್

ಎಲೈ ಅನಘನೇ! ನೀನು ಭೃಗುರಾಮನಾಗಿ ಜನಿಸಿ ಕೊಡಲಿಯನ್ನೇ ಆಯುಧವನ್ನಾಗಿ ಮಾಡಿಕೊಂಡು ಕ್ಷತ್ರಿಯಾಧಮರನ್ನು ನಿಶ್ಶೇಷವಾಗಿ ಸಂಹರಿಸಿ ಅವರ ರಕ್ತದಿಂದ ನಿನ್ನ ಪಿತೃಗಳಿಗೆ ತರ್ಪಣವನ್ನು ನೀಡಿ ತೃಪ್ತಿಯೆಸಗಿದೆ. ಕ್ಷತ್ರಿಯರ ಅಕೃತ್ಯಗಳಿಂದ ಉಂಟಾಗಿದ್ದ ಭೂಭಾರವನ್ನು ಪರಿಹರಿಸಿ ಭೂಮಿಯನ್ನು ರಕ್ಷಿಸಿದೆ. ಇಂತಹ ಶತ್ರು ಭಯಂಕರನಾಗಿ ಉಗ್ರನಾಗಿ ನೀನು ವಿಜೃಂಭಿಸಿದರೂ ನನ್ನ ಪಾಲಿಗೆ ಶರಣಾಗತರಕ್ಷಕ, ನನ್ನ ದುರಿತ ರಾಶಿಗಳನ್ನು ಪರಿಹರಿಸಿ ಕಾಪಾಡುವ ಪ್ರಭುವಾಗಿದ್ದೀಯೆ, ದಯಾಳುವೇ ನೀನು ಶತ್ರುಗಳಿಗೆ ಭಯಂಕರ ಮಿತ್ರರಿಗೆ ಅಭಯಂಕರನಲ್ಲವೇನು.

ಮನುಜ ಸಮಯಂ ಕೃತ್ವಾ
ನಾಥಾ ವತೇರಿಥ ಪದ್ಮಯಾ
ಕ್ವಚನ ವಿಪಿನೇ ಸಾ ಚೇದಂ
ತರ್ಥಿನರ್ಮ ವಿನಿರ್ಮಮೇ

ಕಿಮಥ ಜಲಧಿಂ ಬಧ್ವಾರಕ್ಷೋ
ವಿಧೀಶ ವರೋದ್ಧತಂ
ಬಲಿಮುಖ ಕುಲೋಚ್ಛಿಷ್ಟಂ
ಕುರ್ವನ್ನಿಪುಂ ನಿರಪತ್ರಯಃ

ಎಲೈ ಸ್ವಾಮಿಯೇ! ದುಷ್ಟಶಿಕ್ಷಣಾರ್ಥವಾಗಿಯೂ ಶಿಷ್ಟ ಪರಿಪಾಲನೆಗಾಗಿಯೂ ಮನುಷ್ಯರೂಪದಿಂದ ರಾಮಾವತಾರವನ್ನು ಎತ್ತಿದೆ. ನಿನ್ನ ಜೊತೆಗೆ ಶ್ರೀದೇವಿಯನ್ನೂ ಅವತಾರವೆತ್ತುವಂತೆ ಮಾಡಿದೆ. ನಿನ್ನ ದೇವಿಯು ರಾಕ್ಷಸನಿಂದ ಅಪಹರಿಸಲ್ಪಟ್ಟಂತೆ ಒಂದು ನಿಮಿತ್ತವನ್ನು ಏರ್ಪಡಿಸಿಕೊಂಡು ಅಶೋಕವನದಲ್ಲಿ ಮರೆಯಾಗಿ ನಿಲ್ಲುವ ಸನ್ನಿವೇಶ ಮಾಡಿಕೊಳ್ಳಲು, ನೀನಾದರೋ ತನ್ನ

ಮಿತ್ತವಾಗಿ ಆಕೆಯನ್ನು ಪುನರಾದಾಯಮಾಡಿಕೊಳ್ಳಲು ಸಮುದ್ರಕ್ಕೆ ಸೇತುಬಂಧನವನ್ನು ಎಸಗಿ ಬ್ರಹ್ಮರುದ್ರಾದಿಗಳ ವರದಿಂದ ಅಜೇಯನೆನಿಸಿಕೊಂಡು ಗರ್ವದಿಂದ ಬೀಗಿದ್ದ ರಾಕ್ಷಸಾಧಮನನ್ನು ಕಾಗೆಗಳ ಗುಂಪು ತಿಂದ ಉಚ್ಚಿಷ್ಟದಂತೆ ಮಾಡಿ ನಾಶಪಡಿಸಿದೆಯಲ್ಲವೆ. ಇದರಲ್ಲಿ ನಿನ್ನ ದೇವಿಯನ್ನು ಕಾರಣಮಾಡಿಕೊಂಡು ದುಷ್ಟಶಿಕ್ಷಣ ಎಸಗಿದೆ! ವಿಚಿತ್ರ ತಾನೇ ನಿನ್ನ ವ್ಯಾಪಾರ!

ಯದ್ಯೂತೇ ವಿಜಯಾಪದಾನ
ಗಣನಾಕಾಲಿಂಗದಂತಾಂಕುರೈಃ
ಯದ್ವಿಶ್ಲೇಷ ಲವೋಪಿ ಕಾಲಿಯ
ಭುವೇ ಕೋಲಾಹಲಾಯಾ ಭವತ್
ದೂತ್ಯೇನಾಪಿ ಚಯಸ್ಯ ಗೋಪವನಿತಾಶ್ರೀ
ಕೃಷ್ಣಾಗಸಾಂವ್ಯಸ್ಮರನ್
ತಂ ತ್ವಾಂ ಕ್ಷೇಮ ಕೃಷೀವಲಂ
ಹಲಧರಂ ರಂಗೇಶ ಭಕ್ತಾಸ್ಮಹೇ

ಬಲರಾಮನ ಅವತಾರದ ಬಗೆಗೆ ಅನೇಕರಿಗೆ ವಿವರಗಳು ತಿಳಿದಿಲ್ಲ ಇಲ್ಲಿ ಅಂತಹ ವಿವರಗಳ ಪ್ರಸ್ತಾಪವಿದೆ. ಕಳಿಂಗರಾಜನು ಬಲರಾಮನೊಡನೆ ದ್ಯೂತವಾಡಿ ಸೋತನಂತೆ ಒಂದೊಂದು ಸಲ ಸೋತಾಗಲೂ ಅವನ ಒಂದೊಂದು ಹಲ್ಲನ್ನು ಬಲರಾಮ ಉದುರಿಸಿದನಂತೆ! ಹಲ್ಲುಗಳೆಲ್ಲಾ ಉದುರಿದನಂತರ ಹಲ್ಲುಗಳ ಲೆಖ್ಖದಿಂದ ಬಲರಾಮನು ಎಷ್ಟು ಆಟವಾಡಿದನು ಎಂಬುವುದು ಗೊತ್ತಾಯಿತು ಈ ರೀತಿ ಹಲ್ಲಿನ ದೇರಿನ ಲೆಕ್ಕದಿಂದ ಬಲರಾಮನ ವಿಜಯದ ಗಾತ್ರದ ಅರಿವುಂಟಾಯಿತು. ಬಲರಾಮನು ಇಲ್ಲದೇ ಇದ್ದಾಗ ಕಾಳಿಂಗ ಮರ್ದನದ ಸಾಹಸಕ್ಕೆ ಕೃಷ್ಣನು ಕೈಹಾಕಿದನೆಂದು ತಿಳಿದುಬರುತ್ತದೆ. ಕೃಷ್ಣನು ಗೋಪಿಯರಿಂದ ದೂರವಾದಾಗ ಅವರಿಗೆ ಬಂದ ಕೋಪವನ್ನು ಕೃಷ್ಣನು ಬಲರಾಮನನ್ನು ಮುಂದಾಗಿ ಅವರ ಬಳಿಗೆ ಕಳುಹಿಸಿ ಸಂಧಾನ ಮಾಡಿಸಿ ನಿವಾರಿಸಿದನಂತೆ ಅಂತಹವನು ಲೋಕೋಜ್ಜೀವನಕ್ಕಾಗಿ ಕೃಷೀವಲನ ವೇಷಧಾರಣ ಮಾಡಿ ಕಲ್ಯಾಣ ಮಾಡಿದನೆಂದು ಅಭಿಪ್ರಾಯ ಪಟ್ಟಿದ್ದಾರೆ ಭಟ್ಟರ್

ಆಕಂಠವಾರೀಭರ
ಮಂಥರ ಮೇಘದೇಶ್ಯಂ
ಪೀತಾಂಬರಂ ಕಮಲ
ಲೋಚನ ಪಂಚಹೇತಿ
ಬ್ರಹ್ಮಸ್ತನಂ ಧಯ

ಮಯಾಚತ ದೇವಕೀ ತ್ವಾಂ
ಶ್ರೀರಂಗ ಕಾಂತ ಸುತ
ಕಾಮ್ಯತಿ ಕಾಪರ್ಯೆವಂ

ಎಲೈ ಶ್ರೀರಂಗನಾಥನೇ! ಕುತ್ತಿಗೆಯವರೆಗೂ ಎನ್ನುವಂತೆ ತನ್ನ ಶರೀರವನ್ನೆಲ್ಲಾ ನೀರಿನಿಂದ ತುಂಬಿಕೊಂಡ ನೀಲಮೇಘದಂತೆಯೂ, ಈ ನೀರಿನ ಭಾರದಿಂದ ನಿಧಾನಗತಿಯನ್ನು ಹೊಂದಿ ಪ್ರಕಾಶಿಸುವ ಮೋಡದ ವರ್ಣವನ್ನೂ ಹೊಂದಿ, ಪೀತಾಂಬರ, ಸರೋಜ ನೇತ್ರ, ಪಂಚಾಯುಧಗಳು ಇವುಗಳಿಂದ ಯುಕ್ತನಾದ ಬ್ರಹ್ಮವಸ್ತುವಾದ ಪರಮಾತ್ಮನನ್ನು ತನಗೆ ಮಗುವಾಗಲು ಯಾಚಿಸಿದಳು ದೇವಕೀದೇವಿ ಹಾಗೆ ಯಾಚಿಸಿದ ಅವಳ ಇಷ್ಟವನ್ನು ನೀನು ಪೂರೈಸಿದೆ. ಭಾಗ್ಯವನ್ನು ಹೊಂದಿದ ಆಕೆಯಲ್ಲವೆ ಧನ್ಯಳು. ಪರಮಾತ್ಮನನ್ನು ಮಗನನ್ನಾಗಿ ಪಡೆದ ಮಹಾಭಾಗ್ಯಶಾಲಿ ಮತ್ತೊಬ್ಬಳು ಉಂಟು ಆಕೆ ಕೌಸಲ್ಯೆ. ಆದರೆ ದೇವಕಿಯು ಹಡೆದಾಗ ಶ್ರೀಕೃಷ್ಣ ತಾನು ವಿಷ್ಣುವೆಂಬುದಾಗಿ ತನ್ನ ವಿಶ್ವರೂಪದರ್ಶನದಿಂದ ಆಕೆಗೆ ಮನದಟ್ಟುಮಾಡಿಸಿ ಆಕೆಗೆ ಅನುಗ್ರಹಿಸಿದ ಆ ಭಾಗ್ಯ ಕೌಸಲ್ಯೆಗೆ ಸಿಕ್ಕಲಿಲ್ಲ ಅದಕ್ಕೇ ಇಲ್ಲಿ ಪಂಚಾಯುಧಧಾರಿಯಾದಸ್ವಾಮಿ ಎಂಬ ವಿಶೇಷಣ ಉಪಯೋಗಿಸಲ್ಪಟ್ಟಿರುವುದು ಈ ದೃಷ್ಟಿಯಿಂದ ಮಗುವು ಜನಿಸಿದೊಡನೆಯೇ ಪರಮಾತ್ಮನೇ ತನಗೆ ಶಿಶುವಾಗಿರುವುದನ್ನು ಕಂಡುಕೊಂಡ ದೇವಕಿಯ ಮಾತೃತ್ವಕ್ಕೆ ಭಟ್ಟರು ವಿಶೇಷತೆಯನ್ನು ನೀಡಿರುವುದು





ಕೃಷ್ಣಾವತಾರ ವೈಭವವನ್ನು ಭಟ್ಟರ್ ಅವರು ಮತ್ತೊಂದು ಶ್ಲೋಕದಲ್ಲೂ ವಿವರಿಸಿದ್ದಾರೆ

ಶೈಲೋಗ್ನಿಷ್ಟ ಜಲಾಂಬಭೂವ
ಮುನಯೋ ಮೂಢಾಂ ಬಭೂವುರ್ಜಡಾಃ
ಪ್ರಾಜ್ಞಾಮಾಸುರಗಾಸ್ಸಗೋಪ
ಮಮೃತಾಮಾಸುಃ ಮಹಾಶೀವಿಷಾಃ
ಗೋವ್ಯಾಘ್ರಾಸ್ಸಹಜಾಂ ಬಭೂವುರಪರೇ
ತ್ವನ್ಮಾಂ ಬಭೂವುಃ ಪ್ರಭೋ
ತ್ವಂ ತೇಷ್ವನ್ಯತಮಾಂ ಬಭೂವಿಥ
ಭವದ್ವೇಣುಕ್ವಣೋನ್ಮಾದ್ವನೇ

ಶ್ರೀಕೃಷ್ಣನ ವೇಣುನಾದದ ವೈಭವದ ವರ್ಣನೆಗೆ ಮೀಸಲಾಗಿದೆ ಈ ಶ್ಲೋಕ

ಎಲೈ ದೇವನೇ ! ನಿನ್ನ ವೇಣುನಾದಕ್ಕೆ ಮರುಳಾಗದವರು ಯಾರಿದ್ದಾರೆ ಚರಾಚರ ಜಡಾಜಡ ತಿರ್ಯಕ್‌ಸ್ಥಾವರ ಪಶುಪಕ್ಷಿಗಳೆಲ್ಲವೂ ಏಕಾಗ್ರಚಿತ್ತವಾಗಿ ಆಲಿಸಿ ಆನಂದಿಸಿದಂತಹ ದಿವ್ಯದೇವಗಾನ ಅದು. ಎಲ್ಲವನ್ನೂ ಮೋಹಗೊಳಿಸಿ ವಶಪಡಿಸಿಕೊಂಡ ಮಾಯಾನಾದ ಅದು ಅದ್ಭುತಗಳನ್ನೇ ಎಸಗಿತು ಎಂದರೂ ಅಚ್ಚರಿ ಇಲ್ಲ ಬೆಟ್ಟವೂ ಬೆಂಕಿಯೂ ಕರಗಿ ನೀರಾಗಿ ಹರಿದು ಹೋಗಿದ್ದರೂ ವಿಚಿತ್ರವೆನಿಸದು ಮುನಿಗಳು ತಮ್ಮ ತಪಸ್ಸನ್ನು ತ್ಯಜಿಸಿ ಮೂಢರಾಗಿ ನಿಂತುಕೊಂಡರು ಜಡಪದಾರ್ಥಗಳಾದ ಮರಗಳೂ ಮುಗ್ಧಪಶುಗಳಾದ ಗೋಪಾಲಕರೂ ಕೂಡ ಪ್ರಾಜ್ಞರೂ, ಮಹಾಜ್ಞಾನಿಗಳೂ ಎನಿಸಿಕೊಂಡರು ವೇಣುಗಾನಾಮೃತಾಸ್ವಾದನೆಯಿಂದ ಭಯಂಕರ ವಿಷವನ್ನು ಉಗುಳುವ ಉರಗಗಳೂ ಕೂಡ ಅಮೃತಮಯವಾದುವು. ಹಸುಗಳೂ ಹುಲಿಗಳೂ ಮಿತ್ರರಂತೆ ಜೊತೆಜೊತೆಯಾಗಿ ಸಂಚರಿಸಿದುವು. ಮತ್ತೆ ಕೆಲವು ಜೀವಗಳು ಕೂಡ ಹೀಗೆಯೇ ವಿಚಿತ್ರ ವ್ಯಾಪಾರದಲ್ಲಿ ರಾಜಿಸಿದುವು. ಯಾರಿಗೆ ಗೊತ್ತು ಪ್ರಭುವೇ - ಅವುಗಳಲ್ಲಿ ನೀನೂ ಒಬ್ಬನಾಗಿ ನಿನ್ನನ್ನೂ ಮರೆತುಬಿಟ್ಟಿದ್ದರೆ ಆಶ್ಚರ್ಯವುಂಟೇನು ಈ ರೀತಿಯ ಆಕರ್ಷಣೆ ಮೋಡಿ ನಿನ್ನ ವೇಣುಗಾನದಲ್ಲಿದ್ದಿತು ಭಗವಂತನಿಗಿಂತ ಭಗವಂತನ ಗೆಯ್ಮೆಯಲ್ಲಿಯೇ ಮಹಿಮೆ ಹೆಚ್ಚು ಎಂಬುದನ್ನು ಇಲ್ಲಿ ನಿರೂಪಿಸಲಾಗಿದೆ ಪರಮಾತ್ಮನು ನೆಲಸಿರುವ ಗಿರಿಯೇ ಆಶ್ರಿತರ ಪಾಪವನ್ನು ಹೋಗಲಾಡಿಸುವ ಮಹಿಮೆ ಹೊಂದಿರುವಂತೆ ಆಯಿತಲ್ಲವೇ?

ಕಲ್ಕಿತನುರ್ಧರಣೇಂ ಲಘಯಿಷ್ಯನ್
ಕಲಿಕಲುಷಾನ್ ವಿಲುನಾಸಿ ಪುರಾತ್ಮಂ
ರಂಗನಿಕೇತ ಲುನೀಹಿ ಲುನೀಹೀತಿ
ಅಖಿಲ ಮರುಂತುದಂ ಅದ್ಯ ಲುನೀಹಿ

ಎಲೈ ಶ್ರೀರಂಗನಾಥನೇ! ಕಲ್ಕಿಶರೀರವನ್ನು ಧಾರಣ ಮಾಡುವುದು, ಈ ಪೃಥ್ವಿಯು ತನ್ನ ಭಾರವನ್ನು ಕಳೆದುಕೊಂಡು ನಿರಾಳವಾಗಿ ಉಸಿರಾಡಲು ಕಲಿಕಲುಷವಶರಾಗಿ ಪಾಪಾತ್ಮರಾಗಿರುವವರನ್ನೆಲ್ಲಾ ನಿರ್ಮೂಲ ಮಾಡುವುದರಿಂದ ಭೂಮಿಯು ನಿರಾತಂಕದಿಂದ ಬಾಳುವುದು. ಆದರೆ ಪಾಪಾತ್ಮರು ಹೆಚ್ಚಿ ಅಧರ್ಮವು ಅಭ್ಯುತ್ಥಾನ ಹೊಂದಿರುವ ಈ ಕಾಲದಲ್ಲೇ ಆ ಕಾರ್ಯ ನಡೆದರೆ ಯುಕ್ತವೆನಿಸೀತು ಇನ್ನು ನಿಧಾನಮಾಡಿದರೆ ಅಪಾಯವಾಗಿಬಿಡುತ್ತದೆ ಇನ್ನು ನಿಧಾನ ಮಾಡದೆ ಈಗಲೇ ಕ್ರೂರಿಗಳಾದ ಪ್ರಾಣಿವರ್ಗದ ಸಮಸ್ತರನ್ನೂ ಕತ್ತರಿಸಿಹಾಕಿಬಿಡುತ್ತೇನೆ" ಎಂಬ ಘೋಷಣೆಯೆಸಗುತ್ತಾ ಅವರನ್ನು ನಿಗ್ರಹಿಸುವ ಕಾರ್ಯ ಕೈಕೊಳ್ಳಬೇಕು. ವಿಳಂಬಸಲ್ಲದು. ಅವರಿಗೆ ನಿಗ್ರಹಶಕ್ತಿಯಾಗಿ ನಮಗೆ ಅನುಗ್ರಹ ಮಾಡು ಎಂದು ಭಟ್ಟರು ಹಾರೈಸುತ್ತಾ ದಶಾವತಾರ ವೈಭವವನ್ನು ಈ ರೀತಿ ಮುಕ್ತಾಯಮಾಡುತ್ತಾರೆ ಈ ಸ್ತೋತ್ರದಲ್ಲಿ ಒಂದೊಂದು ಅವತಾರವನ್ನು ಒಂದೊಂದು ವೃತ್ತ ಬಂಧದಲ್ಲಿ ಕೃತಿಸಿರುವುದು ವಿಶೇಷ

ಭಟ್ಟರ ಈ ಸಂಗ್ರಹ ದಶಾವತಾರ ಸ್ತೋತ್ರದಲ್ಲಿ ನಾವು ಅವತಾರ ಕಾರಣ, ಅದರ ವಿವರ, ವ್ಯಾಪ್ತಿ, ವಿಸ್ತರಣೆ, ಫಲಿತಾಂಶ ಇವುಗಳ ವಿವರಣೆ ಇಲ್ಲ ಅವು ಈಗಾಗಲೇ ಹಲವಾರು ದಶಾವತಾರ ಸ್ತುತಿಗಳ ವಿವರಿತಗೊಂಡಿವೆ ಆದ್ದರಿಂದ ಈ ಸ್ತೋತ್ರದಲ್ಲಿ ಹೊಸ ಮಾದರಿಯ ವರ್ಣನೆಯನ್ನು ಕಾಣಿಸಿ ಕಾವ್ಯಮಾರ್ಗವನ್ನು ಕೃತಾರ್ಥ ರೀತಿಯಲ್ಲಿ ನಿರ್ವಹಿಸಿದ್ದಾರೆ ಈ ಸ್ತೋತ್ರ ಶೈಲಿಯನ್ನು ಕಂಡಾಗ ನಮಗೆ ನಮ್ಮಾಳ್ವಾರ್ ಅವರ ತಿರುವಾಯ್ಮೊಳಿಯಲ್ಲಿ ಇಂತಹುದೇ ತಮಿಳು ಪಾಶುರ ಗುಚ್ಛದ ಜ್ಞಾಪಕ ಏರ್ಪಡುವುದು ಸಹಜ ಅದರಲ್ಲಿಯೂ ಆಳ್ವಾರ್ ಪರಮಾತ್ಮನ ಅವತಾರ ವೈಭವವನ್ನು ಹತ್ತು ಪಾಶುರಗಳಲ್ಲಿ ಅತ್ಯಂತ ಆಕರ್ಷಣೀಯವಾಗಿ ವಿವರಿಸಿದ್ದಾರೆ ಆ ವಾಗ್ವೈಭವ ಈ ಸ್ತೋತ್ರದ ವಾಗ್ವೈಭವಕ್ಕೆ ಹೊಯ್‌ಕೈ ಆಗಿ ಮೆರೆಯುತ್ತದೆ (ತಿ ಮೊಳಿ ೭ನೇ ಶತಕದ ನಾಲ್ಕನೇ ದಶಕದ ಹತ್ತು ಪಾಶುರಗಳು ಮತ್ತು ಫಲಶ್ರುತಿ)

ಇಂತಹ ಕಾವ್ಯ ಶ್ರೀಯನ್ನು ಪರಾಶರಭಟ್ಟರು ಶ್ರೀವೈಷ್ಣವ ಸ್ತೋತ್ರಸಾಹಿತ್ಯಕ್ಕೆ ನೀಡಿ ಅದನ್ನು ಶ್ರೀಮಂತಗೊಳಿಸಿದ್ದಾರೆ ಅವರ ದಿವ್ಯವಾಕ್ ಮಧುವನ್ನು ನಾವು ಸವಿದು ಕೃತಾರ್ಥರಾಗೋಣ- ಈ ಅನುಸಂಧಾನದ ಮೂಲಕ ನಮ್ಮ ಭಕ್ತಿ ಪುಷ್ಪವನ್ನು ಪರಮಾತ್ಮನ ಪಾದಾರವಿಂದಗಳಲ್ಲಿ ಅರ್ಪಿಸಿ ಧನ್ಯರಾಗೋಣ



# ಅಕ್ರೂರ ಚರಿತ್ರೆ

( ಕಾವ್ಯ ಪರಿಚಯ )

ಕಂದಾಡೈ ಕೇಶವನ್

ಕನ್ನಡ ಕಾವ್ಯ ಸಾಹಿತ್ಯದಲ್ಲಿ ಸೋಮನಾಥ ಕವಿ ವಿರಚಿತ "ಅಕ್ರೂರ ಚರಿತ್ರೆ" ಕನ್ನಡ ಭಕ್ತಿ ಕಾವ್ಯವೆಂದೇ ಪ್ರಸಿದ್ಧವಾಗಿದೆ. ಇದೊಂದು ವೈಷ್ಣವ ಧರ್ಮವನ್ನು ಪ್ರತಿಪಾದಿಸುವ ಅಕ್ರೂರನೆಂಬ ಭಾಗವತೋತ್ತಮನ ಪುಣ್ಯಚರಿತೆ ಅಕ್ರೂರನ ವಿಷ್ಣುಭಕ್ತಿಯನ್ನು ನಾವು ಭಾಗವತ, ವಿಷ್ಣುಪುರಾಣಗಳಲ್ಲಿ ಕಾಣಬಹುದು ಈತನು ಯದು ವಂಶದ ಶ್ವಪಲ್ಕನ ಮಗ. ತಾಯಿ ಗಾಂದಿನಿ ಕಂಸನ ಆಸ್ಥಾನದ ಮಂತ್ರಿಗಳಲ್ಲಿ ನಂಬಿಕಸ್ತನಾದ ಒಬ್ಬ ಮಂತ್ರಿ. ಈತನ ಮಡದಿ ಆಹುಕನ ಮಗಳಾದ ಭುತನು ಸೋಮನಾಥ ಕವಿ ಭಾಗವತವನ್ನು ಅನುಸರಿಸಿಯೇ ಈ ಕಾವ್ಯವನ್ನು ಬರೆದಿದ್ದಾನೆ. ಕವಿ ತನ್ನ ಕಾವ್ಯದಲ್ಲಿ ಕುಮಾರವ್ಯಾಸನನ್ನು ಸ್ಮರಿಸಿಕೊಂಡಿದ್ದಾನೆ ಆದ್ದರಿಂದ ಈತ ಕುಮಾರವ್ಯಾಸನ ತರುವಾಯ ೧೫ ನೇ ಶತಮಾನದಲ್ಲಿದ್ದಿರದೇಕು ಈ ಕವಿ ಕುಮಾರವ್ಯಾಸನ ಭಾಷಾ ಶೈಲಿಯನ್ನೇ ಅನುಕರಣೆ ಮಾಡಿರುವುದು ಸ್ಪಷ್ಟ. ಅಕ್ರೂರ ಚರಿತೆಯ ಮೊದಲನೆಯ ಸಂಧಿ ೫ನೇ ಪದ್ಯದಲ್ಲಿ-

ಕವಿ ಕುಮಾರವ್ಯಾಸರಾಯನ
ಕವಿತೆ ಜಾಣರ ಸೊಬಗು ರಸ ಭಾ
ವವನು ಸದಲಂಕೃತಿಯನತಿ
ಮಧುರೋಕ್ತಿ ಕೌಶಲವ
ಸವಿನುಡಿಯ ಗಮಕಿಗಳ ಚರಣಾ
ಬ್ಜವನು ಪಿಡಿದ ಕ್ರೂರ ಚರಿತೆಯ
ವಿವರಿಸಿದನಾ ಸೋಮನಾಧ
ಕವೀಂದ್ರ ನೊಲವಿನಲಿ

ಎಂಬುವುದಾಗಿ ಕವಿ ಕುಮಾರವ್ಯಾಸನೊಬ್ಬನನ್ನೇ ಸ್ತುತಿಸಿದ್ದಾನೆ

ಅಕ್ರೂರ ಚರಿತೆಯ ಕಥೆ ಮೂಲ ಭಾಗವತದ ದಶಮಸ್ಕಂದದಲ್ಲಿ ಅಕ್ರೂರನ ಗೋಕುಲಾಗಮನದಿಂದ ಪ್ರಾರಂಭವಾವಾಗುತ್ತದೆ ಆಗಮನದ ಉದ್ದೇಶ ಚರಿತೆ ಬಲರಾಮಕೃಷ್ಣರು ಮಧುರೆಗೆ ಪ್ರಯಾಣ ಗೋಪಿಯರ ವಿರಹ ಅಕ್ರೂರನಿಗೆ ಶ್ರೀ ಮುಕುಂದನ ವಿಶ್ವರೂಪದರ್ಶನ ಮಧುರೆಗೆ ಆಗಮನ ಶ್ರೀಕೃಷ್ಣನಿಂದ ಕಂಸ ವಧೆ ಅಕ್ರೂರನಿಂದ ಕೃಷ್ಣನಿಗೆ ಸತ್ಕಾರ. ಪುನಃ ಶ್ರೀಕೃಷ್ಣನು ಗೋಕುಲಕ್ಕೆ ಹಿಂದಿರುಗಿದ ಪ್ರಸಂಗ ಕಥನ, ಇಲ್ಲಿಗೆ ಅಕ್ರೂರ ಚರಿತೆ ಮುಕ್ತಾಯವಾಗುತ್ತೆ

ಧರೆಯರಿಯಲೀ ಕೃಷ್ಣಚರಿತದ
ಶರಧಿಯೊಳಗಕ್ರೂರ ಚರಿತೆಯ
ನೊರೆವೆನಚ್ಯುತ ಭಕ್ತ
ರೆಲ್ಲರ ಚರಣಗಭಿನಮಿಸಿ
ಗರುವರತಿಕೋವಿದರು ಹಿರಿಯರು
ಸರಸರಿದನಾದರಿಸಿ ತಪ್ಪನು
ಪರಿಹರಿಸಿ ತಿದ್ದುವುದು
ಮೆರೆವುದು ನಿಮ್ಮ ಸದ್ಗುಣವ

ಶ್ರೀಕೃಷ್ಣನ ಚರಿತಾಮೃತವನು ಭಕ್ತರಿಗೆ ತಿಳಿಸುವ ಆಸೆಯಿಂದ ಇರುವ ಕವಿಗೆ ಅಕ್ರೂರ ಚರಿತೆ ನೆಪಮಾತ್ರವಿರದೇಕು

ಇದೊಂದು ಖಂಡಕಾವ್ಯ, ಕವಿಯ ವರ್ಣನೆ ಸಾಮರ್ಧ್ಯ ತಲೆದೂಗುವಂತಹದ್ದು

ಆತನ ಭಾಷೆ, ಶೈಲಿ, ವರ್ಣನಾಪ್ರಸಂಗಗಳು ವೈವಿಧ್ಯದಿಂದ ಕೂಡಿ ಆತನ ಕಲಾಕೌಶಲತೆಯನ್ನು ಸಾರುತ್ತದೆ ಶ್ಲೇಷಾರ್ಥಗಳು ಚಮತ್ಕೃತಿಗಳು ಸ್ವಾಭಾವಿಕವಾಗಿ ಇದ್ದು, ನವರಸಗಳು ಪೋಷಿತವಾಗಿ ಸಂಚಾರಿ ಹಾಗೂ ಸ್ಥಾಯಿ ಭಾವಗಳು ನಮ್ಮನ್ನು ಕಾವ್ಯಲೋಕಕ್ಕೆ ಕೊಂಡೊಯ್ದು ಹೃದಯಕ್ಕೆ ತಂಪನ್ನು ನೀಡುತ್ತವೆ ಇದು ಭಕ್ತಕಾವ್ಯವಾದ್ದರಿಂದ ಕೃಷ್ಣನ ಭಕ್ತಿಯನ್ನು ಅವನ ಮಹಿಮೆಯನ್ನು ಸಾರುವುದೇ ಈ ಕಾವ್ಯದ ಉದ್ದೇಶ

**ಸೋಮನಾಥಕವಿಯು ಅಕ್ರೂರನ ವ್ಯಕ್ತಿತ್ವವನ್ನು ಕುರಿತು ಕಂಸನ ದೃಷ್ಟಿಯಲ್ಲಿ ತನ್ನ ಕಾವ್ಯದಲ್ಲಿ-**

ಆ ಸಭೆಯಲ ಕ್ರೂರನೆಂಬ ಮ
ಹಾ ಸಚಿವನತಿ ಹಿತವ ಶುಚಿ ವಿ
ಶ್ವಾಸಿ,ವಿನಯ, ವಿಭೂಷಣನ
ಗಣಿತ ನೀತಿಯೊಳು ನಿಪುಣ
ದೋಷ ರಹಿತನು ಸುಬಲಸುತ ಧರ
ಣೀಶ ಕುಲದೊಳಭಿಜ್ಞನಿರೆ ಕಂ
ಡಾಸುರಾಧಿಪ ಕಂಸ
ನುಡಿದನುಚಿತ ವಚನದಲಿ

ಕೃಷ್ಣನನ್ನು ಕೊಲ್ಲಲು ಕಂಸ ಹಲವಾರು ಹಂಚಿಕೆಗಳನ್ನು ಒಡ್ಡಿದರೂ ಕೃಷ್ಣನನ್ನು ಕೊಲ್ಲಲಾಗಲಿಲ್ಲ ಕೃಷ್ಣಬಲರಾಮರನ್ನು ಮಧುರೆಗೆ ಕರೆಯಿಸಿ ಕೊಲ್ಲಬೇಕೆಂದು ನಿಶ್ಚಯಿಸಿ ಅಕ್ರೂರನನ್ನು ಅವರನ್ನು ಕರೆತರುವಂತೆ ಸಂಚನ್ನು ಕಂಸನು ಮಾಡಿದನು ಧನುರ್ಯಾಗಕ್ಕಿಟ್ಟಿರುವ ಧನುಸ್ಸನ್ನು ನೋಡಲು ಕೃಷ್ಣನನ್ನು ಕರೆತರುವಂತೆ ಅಕ್ರೂರನಿಗೆ ತಿಳಿಸಿದನು. ಅಕ್ರೂರನು ಬಹುಕಾಲದಿಂದ ಶ್ರೀಕೃಷ್ಣನ ಚಿಂತನೆಯಲ್ಲೇ ಕಾಲತಳ್ಳಿದ್ದನು. ಕಂಸನ ಭಯದಿಂದ ಕೃಷ್ಣನ ದರ್ಶನ ಲಭ್ಯವಾಗಿರಲಿಲ್ಲ ಈಗ ಕಂಸನ ಆಜ್ಞೆಯಿಂದ ಅವನನ್ನು ನೋಡುವ ಸೌಭಾಗ್ಯ ತಾನಾಗಿಯೇ ಒದಗಿ ಬಂದದ್ದರಿಂದ ಅಕ್ರೂರನಿಗೆ ಮಹದಾನಂದ. ಈ ಪ್ರಸಂಗವನ್ನು ಭಕ್ತಕವಿ ಮೆಪ್ಪತ್ತೂರು ನಾರಾಯಣ ಭಟ್ಟಾದಿರಿ ತನ್ನ "ನಾರಾಯಣೀಯಂ" ಮಹಾಕಾವ್ಯದಲ್ಲಿ-

ಅಕ್ರೂರ ಏಷ
ಭವದಂಘ್ರಿ ಪರಿಶ್ಚಿರಾಮ
ತ್ವದ್ದರ್ಶನಾಕ್ಷಮ ಮನಾಃ
ಕ್ಷಿತಿ ಪಾಲ ಭೀತ್ಯಾ
ತಸ್ಯಾಜ್ಞಯೈವ
ಪುನರೀಕ್ಷಿತು ಮುದ್ಯತಸ್ತಾ
ಮಾನಂದ ಭಾರಮತಿ
ಭೂರಿ ತರಂ ಬಭಾರ

ಎಂಬುವುದಾಗಿ ತಿಳಿಸಿದ್ದರೆ, ಮೂಲ ಭಾಗವತ ಅಕ್ರೂರನ ವ್ರಜಯಾತ್ರೆ ಚರಿತ್ರೆಯಲ್ಲಿ ಅಕ್ರೂರನು ಕೃಷ್ಣನನ್ನು ಕಾಣಬೇಕೆಂಬ ಆಸೆಯಲ್ಲಿ ಭಕ್ತಿ ಭಾವದಿಂದ ಹೀಗೆಂದು ಚಿಂತಿಸತೊಡಗಿದನಂತೆ-

ಕಿಂ ಮಯಾ ಚರಿತಂ ಭದ್ರಂ
ಕಿಂ ತಪ್ತಂ ಪರಮಂ ತಪಃ
ಕಿಂ ವಾಥಾಪ್ಯರ್ಹತೇ ದತ್ತಂ
ಯದ್ರಕ್ಷ್ಯಾಮ್ಯದ್ಯ ಕೇಶವಂ

(ಹೇ ಭಗವಾನ್ ನಾನು ಎಂತಹ ಸುಕೃತ ವನ್ನು ಮಾಡಿದ್ದೇನೋ ಎಂತಹ ಶ್ರೇಷ್ಠ ತಪಸ್ಸನ್ನು ಆಚರಿಸಿದ್ದೇನೋ? ಸತ್ಪಾತ್ರನಿಗೆ ಎಂತಹ ವಿಶಿಷ್ಟ ವಾದ ದಾನವನ್ನು ಮಾಡಿದ್ದೇನೋ? ಆ ಶುಭ ಕಾರ್ಯಗಳ ಫಲವಾಗಿ ಅಂತಹ ಮಹತ್ತ್ವ ತಪಸ್ಸಿನ, ದಾನದ ಫಲದಿಂದ ನಾನಿಂದು ಮಂಗಳ ಮೂರ್ತಿಯಾದ ಮುಕುಂದನ ದರ್ಶನ ಲಾಭ ವನ್ನು ಪಡೆಯುವ ಮಹಾಭಾಗ್ಯ ಒದಗಿಬಂದಿದೆ)

ಮಮಾದ್ಯಾ ಮಂಗಲಂ ನಷ್ಟಂ
ಫಲವಾಂ ಶ್ಚೈವ ಮೇ ಭವಃ
ಯನ್ನ ಮಸ್ಯೇ ಭಗವತೋ
ಯೋಗಿಧ್ಯೇಯಾಂಘ್ರಿಂ ಪಂಕಜಂ

(ನಿಜವಾಗಿಯೂ ಈದಿನ ನನ್ನ ಸಮಸ್ತ ಪಾಪ ಗಳ ಪರಿಹಾರ ಮಹಾಯೋಗಿಗಳಿಗೂ ಧ್ಯಾನಕ್ಕೆ ಮಾತ್ರ ನಿಲುಕುವಂತಹ ಸಚ್ಚಿದಾನಂದ ಪರ ಮಾತ್ಮನ ದಿವ್ಯ ಪಾದಾರವಿಂದಗಳನ್ನು ನಮಿಸುವ ಸೌಭಾಗ್ಯ ನಾನಿಂದು ಪಡೆಯುತ್ತಿರುವೆ)

ಆ ಕೃಷ್ಣನ ಪಾದಾರವಿಂದಗಳ ಮಹಿಮೆ ಅಪಾರ ಅದರ ಮಹಿಮೆ ವರ್ಣಿಸಲು ಅಸದಳ-

ಮುಕುಂದಸ್ಯ ಪಾದಾರವಿಂದ
ಯದರ್ಚಿತಂ ಬ್ರಹ್ಮಭವಾದಿಭಿಃ ಸುರೈಃ
ಶ್ರೀಯಾ ಚ ದೇವ್ಯಾ
ಮುನಿಭಿಃ ಸ ಸಾತ್ವತೈಃ
ಗೋಃಚಾರಣಾಯಾನು ಚರೈಶ್ಚರ ದ್ವನೇ
ಯದ್‌ಗೋಪಿಕಾನಾಂ ಕುಚ
ಕುಂಕುಮಾಂಕಿತಮ್

(ಯಾರ ಪಾದಾರವಿಂದಗಳನ್ನು ಬ್ರಹ್ಮರುದ್ರ ಇಂದ್ರಾದಿಗಳೂ ದೇವತೆಗಳೂ ಮಹಾ ಲಕ್ಷ್ಮಿಯೂ ಮುನಿಗಳೂ ಯಾದವರೂ ನಿರಂ ತರವೂ ಪೂಜಿಸುವರೋ ಯಾವ ಚರಣ ಕಮಲಗಳು ಗೋಕುಲದಲ್ಲಿ ಗೋಪಾಲರೊ ಡನೆ ಗೋವುಗಳನ್ನು ಮೇಯಿಸಲು ಸಂಚರಿ ಸುತ್ತಿರುವವೋ, ಗೋಪಿಯರ ಕುಚಗಳಲ್ಲಿರುವ ಕುಂಕುಮ ಕೇಸರಿಯಿಂದ ಪೂಜಿಸಿರುವ ದಿವ್ಯ ವಾದ ಪವಿತ್ರವಾದ ಪಾವನಕರವಾದ ಸ್ವಾಮಿಯ ಚರಣಾರವಿಂದಗಳನ್ನು ನಾನು ತಕ್ಷಣವೇ ಸನಿಹ ದಲ್ಲಿ ಕಾಣಲಿರುವೆನು) ಈ ಭಾವವನ್ನೇ ಕವಿ ಸೋಮನಾಥನು ತನ್ನ ಕಾವ್ಯದಲ್ಲಿ ಚಿತ್ರಿಸಿ, ಸಹಜ ಭಕ್ತಿ ಭಾವದಿಂದ ತನ್ನ ಹೃದಯದ ಭಾವ ವನ್ನು ಸೂಚಿಸುವಾಗ-

ಅಂದಿನಿರುಳಕ್ರೂರ ತನ್ನಯ
ಮಂದಿರಕೆ ನಡೆತಂದು ಪರಮಾ
ನಂದಮಯ ಶರಧಿಯಲಿ
ಮುಳುಗುತ ಶಿರವನೊಲೆದೊಲೆದು
ಇಂದು ನಾ ಸುಖಿಯಾದೆನೀ ಗೋ
ವಿಂದನನು ಕಣ್ಣಾರೆ ಕಂಡಹೆ
ನೆಂದು ನಲಿನಲಿದಾಡುತಿರ್ದನು
ಬಹಳ ಹರುಷದಲಿ

ತನ್ನ ಭಾಗ್ಯವನ್ನು ಕುರಿತು ಅಕ್ರೂರನು ಕಣ್ಣಿಲ್ಲದ ವನು ದೃಷ್ಟಿಯನ್ನು ಪಡೆದಂತೆ, ಸತಿ ಮಗುವನ್ನು ಪಡೆದಂತೆ, ಕೃಪಣನು ನಿಧಿಯನ್ನು ಪಡೆದಂತೆ, ಯತಿಗಳು ಮಂದಮತಿಯರು ತಮ್ಮ ಇಚ್ಛೆ ಯನ್ನು ಪಡೆದಂತೆ, ಭಕ್ತ ಪರಾಧೀನನಾದ ಕೃಷ್ಣ ನನ್ನು ತಾನು ನೋಡುವ ಭಾಗ್ಯವನ್ನು ಹೊಂದುತ್ತಿ ರುವೆನು ಎಂಬುವುದಾಗಿ ಅಕ್ರೂರನ ಭಾಗ್ಯವನ್ನು ಸೋಮನಾಥಕವಿ ವರ್ಣಿಸಿದ್ದಾನೆ ಆ ಇಡೀ ರಾತ್ರಿ ಕೃಷ್ಣನ ಸ್ಮರಣೆಯಲ್ಲೇ ಕಳೆದನಂತೆ ಅವನೊಬ್ಬನ ಚರಣವನು ನಿಗಮಾವಳಿಗಳು (ವೇದ) ಅಜ ಮುಖ್ಯದೇವರು (ಬ್ರಹ್ಮಾದಿಗಳು) ಶುಕನಾರದಾ ದಿಗಳು ಕಾಣಲರಿಯರು, ಭಾವದಲಿ ನಿರ್ಧರಿಸ ಲರಿಯದ ದೇವದೇವೋತ್ತಮನ ನಾಳಿನ ಜಾವ ದಲಿ ಕಾಣುವೆನು - ಎಂದು ಅಡಿಗಡಿಗೆ ಬೆರ ಗಾದ, ಎಂಬುವುದಾಗಿ ಸೋಮನಾಥ ಕವಿ ವರ್ಣಿ ಸಿದರೆ, ಜಗನ್ನಾಥ ವಿಜಯವನ್ನು ಬರೆದ ರುದ್ರ ಭಟ್ಟ ಕವಿ ತನ್ನ ಕಾವ್ಯದಲ್ಲಿ ಅಕ್ರೂರನ ಭಾಗ್ಯ ವನ್ನು ಹೊಗಳುತ್ತ ಕೃಷ್ಣನನ್ನು ನೋಡದೇಕೆಂಬ ಅಕ್ರೂರನ ಮನಸ್ಸು ಅಂತರ್ಮುಖವಾಗಿ ಉತ್ಸಾ ಹಗೊಂಡಿದ್ದ ಅವನ ಭಾವವನ್ನು ವರ್ಣಿಸುವಾಗ ಸನಕಾದಿಗಳು ಅನಂತ ಯುಗಕಾಲ ಧ್ಯಾನಿಸಿ ದರೂ ಪಡೆಯಲಾಗದ ಲಕ್ಷ್ಮೀಶನನ್ನು ನಾನು ಹೋಗಿ ಒಂದು ನಿಮಿಷದಲ್ಲಿ ಪಡೆಯುವೆನ್ನುನನ ಗಿಂತ ಧನ್ಯರು ಯಾರು ಇದ್ದಾರೆ ಈ ಭುವ ನದಲ್ಲಿ, ಯೋಗಿಗಳಿಗೆ ನಿಲುಕದ ಆ ನಿರಾಕಾರ ವಾದ ಆ ಪರಬ್ರಹ್ಮವೇ ಸಾಕಾರತೆಯನ್ನು ಪಡೆದ ಅಂದವನ್ನು ನೋಡುವ ಸುಕೃತವು ನನಗೆ ಒದ ಗಿತು - ಎಂಬುವುದಾಗಿ ವರ್ಣಿಸುವಾದ ರುದ್ರ ಭಟ್ಟನು ಭಾವ ಪರವಶತೆಯಿಂದ ಅಕ್ರೂರನ ಸುಕೃತವನ್ನು-

ತ್ರಿದಶ ಮುನಿ ಶ್ರೇಷ್ಠರ ಬಾರು
ದೃಷ್ಟಿಗಂ ಕಾಣಲರಿದೆನಿಪ್ಪಮಿತಾ ಕಾ
ರದ ನಾರಾಯಣನಂ ಚ
ರ್ಮದೃಷ್ಟಿಯೊಳೆ ಕಂಡಪೆಂಗಡಾನೆ ಕೃತಾರ್ಥಂ

ಅಮಿತಾಕಾರದ ನಾರಾಯಣನನ್ನು ನನ್ನ ಕಣ್ಣಿ ನಿಂದಲೇ ಕಾಣುವೆನು ಎಂಬುವುದಾಗಿ ತಿಳಿಸಿದ್ದಾನೆ ಅಕ್ರೂರನ ಮನಸ್ಸತ್ತ್ವಜಿಜ್ಞತೆಯನ್ನು ತಿಳಿಸುವಾಗ ರಾಕ್ಷಸನ ಚರನೆಂದು ನನ್ನನ್ನು ತಿರಸ್ಕ ರಿಸುವನೋ ಅಥವಾ ನಾನು ಕೃಷ್ಣನ ಕಿಂಕರ ನೆಂದು ಮನ್ನಿಸುವನೋ ಎಂಬುವ ದ್ವಂದ್ವಗಳ ತೊಳಲಾಟದಲ್ಲಿ ಅಕ್ರೂರನ ಸಮಾಧಾನದ ನಿಟ್ಟು ಸುರು "ಕರ್ಮಸಾಕ್ಷಿ ಚೈತನ್ಯ ಚೈತನ್ಯ ರೂಪನರಿ ಯನೆ ಕೃಷ್ಣಂ" ಎಂಬುವ ಮಹಾ ವಿಶ್ವಾಸದಿಂದ ಅಕ್ರೂರನು ಗೋಕುಲಕ್ಕೆ ಪ್ರಯಾಣಮಾಡಿದನು ಅಕ್ರೂರನು ಭಾವ ಪರವಶತೆ ಹರಿಯ ಪದ ವನು ಅರ್ಚಿಸದ ಹರಿಯ ಶರಣರೊಡನೆ ಸಖ ತ್ವವಿಲ್ಲದ ಮುರಹರನ ಕೀರ್ತಿಸದೆ ಲಕ್ಷ್ಮೀದರನ ಅರ್ಚಿಸದೆ ಶರಧಿ ಶಯನನ ಗುಣಕಥೆನಾದರಿಸಿ ಕೇಳದೆ ಹಿರಿಯ ತನದಲಿ ಬೆರೆವ ನರನು ಇಹಪ ರಕೆ ಬಾಹಿರನು ಎನುತ ಬರುತಿರ್ದನು - ಎಂಬು ವುದಾಗಿ ಸೋಮನಾಥ ಕವಿ ವರ್ಣಿಸಿದ್ದಾನೆ. ಈ ಕವಿ ಭಕ್ತಾಗ್ರೇಸರನಾದ ಕುಲಶೇಖರರು ಮುಕುಂ ದಮಾಲೆಯಲ್ಲಿ ಹೇಳಿರುವ-

ಜಿಹ್ವೇ ಕೀರ್ತಯ ಕೇಶವಂ
ಮುರರಿಪುಂ ಚೇತೋ ಭಜ ಶ್ರೀಧರಂ
ಪಾಣಿದ್ವಂದ್ವ ಸಮರ್ಚ
ಯಾಚ್ಯುತ ಕಥಾಶ್ರೋತ್ರ
ದ್ವಯ ತ್ವಂ ಶೃಣು
ಕೃಷ್ಣಂ ಲೋಕ ಚ
ಲೋಚನ ದ್ವಯ ಹರೇಃ
ಗಚ್ಛಾಂ ಘ್ರಿಯುಗ್ಮಾಲಯಂ
ಜಿಘ್ರ ಘ್ರಾಣ ಮುಕುಂದ
ಪಾದ ತುಲಸೀಂ
ಮೂರ್ಧನ್ ನಮ ಅಧೋಕ್ಷಜಂ

ಎಂಬುವ ಭಾವವನ್ನೇ ಸೋಮನಾಥ ಕವಿಯು ಅಕ್ರೂರನ ಬಾಯಿಂದ ಎರಡನೆಯ ಸಂಧಿ ಯಲ್ಲಿ-

ಹರಿಯ ನೆನೆಯದ ಮನ, ಮುರಾರಿಯ
ಚರಣವನು ಪೂಜಿಸದ ಕೈ, ಭೂ
ಧರನ ಹೊಗಳದ ಜಿಹ್ವೇ,
ವಿಷ್ಣು ಕ್ಷೇತ್ರ ಯಾತ್ರೆಗಳ
ಚರಿಸದಂಘ್ರಿಗಳಿಂದಿರೇಶನ
ಬಿರುದ ಕೇಳದ ಕಿವಿಗಳವು ಜೇ
ವರಿಗೆ ಪೂರ್ವದಹಗೆ
ಗಳೆನುತ ಅಕ್ರೂರ ನಡೆತಂದ

ಪಂಚೇಂದ್ರಿಯಗಳನ್ನು ಹರಿಗೆ ಅರ್ಪಿಸದಿದ್ದರೆ ಅವುಗಳು ಮಾನವನಿಗೆ ಹಿಂದಿನ ಜನ್ಮದ ಪಾಪ ದಿಂದ ಸಂಚಿತವಾದ ವೈರಿಗಳೆಂದು ಅಕ್ರೂರನ

ಮಠ. ನಿತ್ಯಾತ್ಮ ಶುಕಯೋಗಿ ಎಂಬುವ ಕಾವ್ಯನಾಮದ ಗೋಪೀನಾಥ ಕವಿ ಬರೆದ ಶ್ರೀಕೃಷ್ಣ ಚರಿತೆಯಲ್ಲಿ ಕವಿ ಅಕ್ರೂರನ ಗೋಕುಲದ ಆಗಮನವನ್ನು ಕುರಿತು ಹೀಗೆಂದು ಬರೆದಿದ್ದಾನೆ

ತಾನು ಕೃಷ್ಣಭಕ್ತ ಕಂಸನಾಜ್ಞೆಯಿಂದ ತಾನು ಕೃಷ್ಣನನ್ನು ಕರೆತರಲು ತೆರಳುತ್ತಿದ್ದೇನೆ ಕಂಸನ ಉದ್ದೇಶ ಕೃಷ್ಣನನ್ನು ಕೊಲ್ಲದೇಕೆಂದು ನಿಶ್ಚಿತವಾದ ಸ್ಪಷ್ಟವಾದ ಸಂಚು ಅದನ್ನು ಅವನ ಬಾಯಿಂದಲೇ ಕೇಳಿದ್ದ. ಈ ವಿಷಯವನ್ನು ನಿತ್ಯಾತ್ಮ ಶುಕಯೋಗಿ ವರ್ಣಿಸುವಾಗ ಅಕ್ರೂರನ ಮನಸ್ಸಿನ ತಳಮಳವನ್ನು ಕಂಡು-

ಬಂದನಿವನಾ ಕಂಸನಾಜ್ಞೆಯ
ಲಿಂದು ತನ್ನಲ್ಲಿಗೆ ತದಾಶ್ರಯ
ನೆಂದು ತತ್ಪರನೆಂದು
ತತ್ಕಾರ್ಯೈಕ ಪರನೆಂದು
ಮಂದ ಭಾಗ್ಯ ನನಕಟ ದೇವ ಮು
ಕುಂದನೆನ್ನನು ಬಗೆವನೋ ಗೋ
ವಿಂದನದು ಹುಸಿ
ಚೇತನಾತ್ಮಕನು ಅರಿಯನೇ

ಎಂದ ಅಕ್ರೂರ ಕೃಷ್ಣ ದರ್ಶನದ ಆತುರತೆಯಿಂದ ಸಂಜೆ ಬೃಂದಾವನವನ್ನು ಸೇರಿ ಬಲರಾಮಕೃಷ್ಣರನ್ನು ಕಂಡು ದಂಡಪ್ರಣಾಮ ಮಾಡಿದನು. ಕೃಷ್ಣ ಬಲರಾಮರು ಅಕ್ರೂರನನ್ನು ಸಂತೈಸಿ ಚೆನ್ನಾಗಿ ಆದರಿಸಿ ಅತಿಥಿ ಸತ್ಕಾರಮಾಡಿ ಬಹಳವಾಗಿ ಉಪಚರಿಸಿದರು ಅಕ್ರೂರನ ಆಗಮನದ ಉದ್ದೇಶ ತಿಳಿದ ಕೃಷ್ಣ ಗಹಗಹಿಸಿ ನಕ್ಕನು ರಾಮಕೃಷ್ಣರನ್ನು ಮಧುರಾಪಟ್ಟಣಕ್ಕೆ ಕರೆದೊಯ್ಯಲು ಅಕ್ರೂರನು ಬಂದಿರುವನೆಂಬ ಸಮಾಚಾರವನ್ನು ತಿಳಿದ ಗೋಪಿಯರು ಬಹಳ ದುಃಖಿತರಾದರು.

## ಗೋಪೀ ವಿಲಾಪ

ವಾಸರು ಭಾಗವತದ ದಶಮಸ್ಕಂದದ ೩೯ನೇ ಅಧ್ಯಾಯದಲ್ಲಿ ಗೋಪಿಯರ ಪ್ರಲಾಪವನ್ನು ಬಣ್ಣಿಸುವಾಗ, ಗೋಪಿಯರು ಪರಿತಾಪದಿಂದ ನಿಟ್ಟುಸಿರು ಬಿಟ್ಟರು. ಅವರ ಮುಖ ಕಮಲಗಳು ಬಾಡಿಹೋದವು . ಕೈತೊಡಗಗಳು ಕಳಚಿಬಿದ್ದವು, ತುರುಬುಗಳು ಬಿಚ್ಚಿಕೊಂಡವು, ಇವುಗಳ ಯಾವ ಪರಿವೆಯೂ ಅವರಿಗಿರಲಿಲ್ಲ ಶ್ರೀಕೃಷ್ಣನಲ್ಲಿಯೇ ದತ್ತ ಚಿತ್ತರಾಗಿ ಅವನನ್ನೇ ಧ್ಯಾನಿಸುತ್ತಾ ಸಮಾಧಿಸ್ಥಿತರಾದರಂತೆ ಅವನ ಮಂದಹಾಸವನ್ನು ನೆನೆದರು ಅವನ ನಡೆನುಡಿ ನೋಟಗಳನ್ನು ಸ್ಮರಿಸಿದರು ಅವನ ವಿರಹದಿಂದ ತತ್ತರಿಸಿ ಹೋದರಂತೆ

ಚಿಂತಯಂತ್ಯೋ ಮುಕುಂದಸ್ಯ
ಭೀತಾ ವಿರಹಕಾತರಾಃ
ಸಮೇತಾಃ ಸಜ್ಞಶಃ
ಪ್ರೋಚುರಶ್ರುಮುಖ್ಯೋಽಚ್ಯುತಾಶಯಾಃ

ಇದೇ ವಿಷಯವನ್ನು 'ಕಪ್ಪಣ್ಣ ಕವಿ' ತನ್ನ ಶ್ರೀಕೃಷ್ಣ ಚರಿತಾಮೃತಮ್ ಎಂಬುವ ಕಾವ್ಯದಲ್ಲಿ ಗೋಪಿಯರ ಅವಸ್ಥೆಯನ್ನು ತಿಳಿಸುತ್ತಾ-

ಹರಿರಾಮರಿರ್ವರುಂ
ಪಯಣ ಮಾಡುವರೆಂಬ
ವಿರಹದಿಂ ಹೃದಯ
ತಾಪದಿ ಬಳಲಿ ತರಳೆಯರು
ಮರೆದಿತರ ಕೃತಿಗಳಂ
ಚಿಂತೆಯಿಂ ದೇಯುತ್ತ
ಯೋಗಿಯೊಲು ಜಗವರಿಯದೆ
ಚರಿತೆಯಂ ಸ್ಮರಿಸುತ್ತ
ಲೊಂದೊಂದು ಲೀಲೆಯಂ
ಪರಿಪರಿ ಯೊಳೊರೆಯುತ್ತ
ಲದ್ಭುತದ ಕೃತಿಗಳಂ
ಸರಸಿಜಾಕ್ಷನ ಕೃಪೆಯ
ನುಡಿಗಳಂ ನೆನೆಯುತ್ತ
ಹಾಯೆನ್ನುತಳವಳಿದು

ರಾಮಕೃಷ್ಣರನ್ನು ಅಕ್ರೂರನು ಕೊಂಡೊಯ್ಯುವನೆಂಬ ವಾರ್ತೆ ಕೇಳಿದ ಗೋಪಿಯರು ವಿಧಾತನಿಗೆ ಕರುಣೆಯಿಲ್ಲವೆಂದು ಜರಿದರು. ಮುಕುಂದನ ಮುಖಕಮಲದ ಸೊಬಗನ್ನು ತಮಗೆ ತೋರಿಸಿ ಈಗ ನಮ್ಮಿಂದ ಅವನನ್ನು ದೂರವಾಗಿ ಕೊಂಡೊಯ್ಯುವ ವಿಧಿಯ ವೈಚಿತ್ರ್ಯವನ್ನು ತೆಗಳಿದರು ಭಾಗವತದಲ್ಲಿ-

ಕ್ರೂರಸ್ತ್ವಂ ಅಕ್ರೂರ
ಸಮಾಖ್ಯಯಾಸ್ಮ
ನ ಶ್ಚಕ್ಷುರ್ಹಿ ದತ್ತಂ
..........................

ವಿಧಾತನೇ ಅತ್ಯಂತ ಕ್ರೂರಿಯಾದ ನೀನು ಅಕ್ರೂರನೆಂಬ ಹೆಸರಿಗೆ ತಕ್ಕವನಲ್ಲ ನಮ್ಮ ಕಣ್ಮಣಿಯನ್ನು ಕಾಣದ ನಮ್ಮ ಕಣ್ಣುಗಳು ಕುರುಡೇ ಸರಿ ಹೌದು ಕ್ರೂರನಲ್ಲಾ ಹೆಸರಿದೇಕಕ್ರೂರ ನೆಂದೀತಂಗೆ ನಮ್ಮ ಶರೀರ ಮಾತ್ರವನುಳುಹಿ ಜೀವವನೊಯ್ವ ಪಾತಕಿಗೆ - ಎಂಬುವುದಾಗಿ ಅಕ್ರೂರನನ್ನು ಜರಿದರು ಜವ್ವನೆಯರು, ಸೋಮನಾಥ ಕವಿ ಗೋಪಿಯರ ಅವಸ್ಥೆಯನ್ನು ಚಿತ್ರಿಸುವಾಗ-

ಕರೆದ ಕೆಲಸವ ಬಿಟ್ಟು ಕಡೆವುದ
ಮರೆತು ಮಕ್ಕಳ ಬಿಸುಟು ಗಂಡನ
ತೊರೆದು ಮದನನ ಮದವಿಕಾರ-
ದಲಬಳೆ ಗೋಪಿಯರು
ನಿರಿಯ ನೋಸರಿಸುತ್ತ ಲಚ್ಯುತ
ನರಿಕೆಯಲಿ ಕಳವಳದ ಕರಣದ
ಲರಸುತ್ತೈದಿದರತ್ಯಧಿಕ
ವಿರಹಾನು ತಾಪದಲಿ

ಈ ಭಾವವನ್ನೇ ಪು. ತಿ. ನರಸಿಂಹಾಚಾರ್ಯರ ಗೋಕುಲ ನಿರ್ಗಮನದಲ್ಲಿ ಕೃಷ್ಣನ ಕೊಳಲಿನ ಕರೆ ಎಂಬುವ ಹಾಡಿನಲ್ಲೂ ವ್ಯಕ್ತವಾಗಿರುತ್ತೆ ಸೋಮನಾಥ ಕವಿ ಗೋಪಿಯರ ವಿರಹ ವೇದನೆಯನ್ನು ಅವರ ಆಲಾಪ, ಮೊರೆ,ಸ್ತುತಿಗಳನ್ನು ಸುಮಾರು ೬೦ ಪದ್ಯಗಳಲ್ಲಿ ಚಿತ್ರಿಸಿದ್ದಾನೆ ಈ ಪದ್ಯಗಳು ಗೋಪಿಯರ ನಿಶ್ಚಲ ಪ್ರೇಮದ ಮೆಟ್ಟಿಲುಗಳಾಗಿ ನಮಗೆ ಅಮಿತ ಆನಂದ ರಸಾಸ್ವಾದನೆಯನ್ನು ನೀಡುತ್ತವೆ ಕೃಷ್ಣನು ಹೊರಟರೆ ತಮಗೆ ಸಾವೇ ಗತಿ ಎಂಬುವುದಾಗಿ ಗೋಪಿಯರು ತಿಳಿಸಿದಾಗ ಭಕ್ತಪರಾಧೀನನಾದ ಶ್ರೀಕೃಷ್ಣನು ವಿರಹವೇದನೆಯಿಂದ ಬಳಲುತ್ತಿದ್ದ ಆ ಗೋಪಿಯರನ್ನು ಕುರಿತು - ಮನಗುಂದದಿರಿ, ಮುಖವು ಏಕೆ ಕುಂದಿದೆ ನಮ್ಮ ತಂದೆಯರಾಣೆ, ಧನುರ್ಮಹೋತ್ಸವವನ್ನು ಮುಗಿಸಿಕೊಂಡು ಮರುದಿನವೇ ನಿಮ್ಮಲ್ಲಿಗೆ ಮರಳಿ ಬರುತ್ತೇನೆ. ನಿಮ್ಮನ್ನು ತೊರೆದು ಬಹುಕಾಲ ಎಲ್ಲೂ ಹೋಗುವುದಿಲ್ಲ.

ಸಂದನಾಣೆ ಧನುರ್ಮಹೋತ್ಸವ
ದೊಂದಿರುಳೊಳಲ್ಲಿರ್ದು ಮರುದಿನ
ಬಂದು ನಿಮ್ಮೊಡ
ನಿಲ್ಲದಿರೆ ನಂಬುಜಾಕ್ಷಿ ಕೇಳೆಂದ

ಬಳಿಕ ಶ್ರೀಕೃಷ್ಣನು ಬಲರಾಮನೊಡನೆ ಅಕ್ರೂರನ ರಥದಲ್ಲಿ ಕುಳಿತು ವಾಯುವೇಗದಿಂದ ಮಧುರೆಗೆ ಬರುವಾಗ ಸಾಯಂಕಾಲವಾಯಿತು ಅತಿ ಮನೋಹರವಾದ ಯಮುನಾನದಿಯ ದಂಡೆಯ ಮೇಲೆ ರಥವನ್ನು ನಿಲ್ಲಿಸಿದನು ಬಲರಾಮಕೃಷ್ಣರಿಗೆ "ನೀವು ಈ ರಥದ ಮೇಲೆಯೇ ಕುಳಿತಿರಿ, ನಾನು ಸಂಧ್ಯಾವಂದನೆಯನ್ನು ಮಾಡಿ ಬರುತ್ತೇನೆ - ಎಂದು ಹೇಳಿ ಯಮುನಾನದಿಗೆ ಹೋಗಿ ವಿಧಿವತ್ತಾಗಿ ಸ್ನಾನ ಮಾಡಿದನು ಆತನು ನದಿಯಲ್ಲಿ ಪಾಪಪರಿಹಾರಕ್ಕಾಗಿ ಅಘಮರ್ಷಣ ಮಂತ್ರಗಳನ್ನು ಜಪಿಸುತ್ತಾ ಯಮುನಾನದಿಯ ನೀರಿನಲ್ಲಿ ಮುಳುಗಿದನು

## ವಿಶ್ವರೂಪದರ್ಶನ

ಅಲ್ಲಿ ಯಮುನಾನದಿಯ ಮಡುವಿನಲ್ಲಿ ರಾಮಕೃಷ್ಣರು ಜೊತೆಗೂಡಿ ಇರುವುದನ್ನು

ಕಂಡ ಈಗತಾನೇ ತಾನು ಅವರಿಬ್ಬರನ್ನು ರಥದಲ್ಲಿ ಕುಳ್ಳಿರಿಸಿ ಬಂದೆನಲ್ಲಾ ಅವರು ನೀರಿನೊಳಗೆ ಹೇಗೆ ಬಂದರು ಎಂಬುವ ಸಂಶಯದಿಂದ ನೀರಿನಿಂದ ಎದ್ದು ನೋಡಲು ರಾಮಕೃಷ್ಣರನ್ನು ಎಂದಿನಂತೆ ರದದಲ್ಲಿ ಅಕ್ರೂರ ಕಂಡ ಪುನಃ ಮಡುವಿನಲ್ಲಿ ಮುಳುಗಿದಾಗ ಶಂಕಚಕ್ರದಾರಿಯೂ ಕೌಸ್ತುಭವೇ ಮುಂತಾದ ಆಭರಣಗಳನ್ನು ಧರಿಸಿದ ವಿಷ್ಣುವನ್ನೂ ಸಕಲ ದೇವತೆಗಳು, ಸಿದ್ದಚಾರಣ ಗಂಧರ್ವರು ವಿಷ್ಣುವನ್ನು ಸ್ತುತಿಸುವ ಮನೋಹರ ದೃಶ್ಯವನ್ನು ವೀಕ್ಷಿಸಿದನು ಇದನ್ನು ಸೋಮನಾಥಕವಿ ವರ್ಣಿಸುವಾಗ-

ಹರುಷ ಮಿಗೆ ಗೋಪಾಲ ಮಂತ್ರೋ
ಚ್ಚರಣೆಯಿಂದ ಘಮರುಷಣವನಾ
ದರಿಸುತಿರೆ ಜಲದೊಳಗೆ
ರವಿ ಶತಕೋಟಿ ರಶ್ಮಿಯಲೀ
ಮೆರೆವ ದೇಹಚ್ಛವಿಯ ವಿಕಚಾಂ
ಬುರುಹ ನೇತ್ರದ ಕೌಸ್ತುಭಾದ್ಯಾ
ಭರಣ ದನುಪಮ ಶಂಖ
ಚಕ್ರವ ವಿಷ್ಣುವೆಸದಿರ್ದ
ಆ ಮುಕುಂದನ ಕಂಡು ದಿವ್ಯ
ಪ್ರೇಮದಲಿ ಮೆಯ್ಯಿಕ್ಕಿ ಸೌಖ್ಯದ
ಸೀಮೆಯಲಿ ಸಂತುಷ್ಟನಾಗಿ
ನಿರಂತರಾಯದಲಿ
ಕಾಮಿಸದೆ ಕಲ್ಪಿಸದೆ ಭವದಲಿ
ಕ್ಷೆಮುಗಿದು ಕೊಂಡಾಡುತಿರೆ ನಿ
ಸ್ಸೀಮ ದೇವರ ದೇವ
ರಿತ್ತರು ದಿವ್ಯಲೋಚನವ

ಯಮುನಾನದಿಯಲ್ಲಿ ತಾನು ಮುಳುಗಿದ್ದು, ವಿಷ್ಣುವಿನ ಉದರದಲ್ಲಿ ತಾನು ಹೊಕ್ಕಿದ್ದು, ಸರ್ವವ್ಯಾಪಿ ವಿಷ್ಣುವನ್ನು ಕಂಡಿದ್ದು, ನೀರಿನ ನಿಡುವೆ ಶೇಷಸರ್ಪ ಶಯನನಾದ ಕೃಷ್ಣನನ್ನು ಕಂಡಿದ್ದು, ಪರಮಾತ್ಮನ ಅಪರಿಮಿತವಾದ ಭವ್ಯರೂಪದ ವೀಕ್ಷಣೆ ಅಕ್ರೂರನಿಗೆ ಪರಮಾನಂದವಾಯಿತು ಪರಾಭಕ್ತಿಯಿಂದ ಆತನು ರೋಮಾಂಚಿತನಾದನು ಶ್ರೀಕೃಷ್ಣನೇ ಪರಮ ಪುರುಷ ಪರಮಾತ್ಮನೆಂಬ ಭಾವನೆಯನ್ನು ಪಡೆದು ಆನಂದ ಭಾಷ್ಪವನ್ನು ಹೊಂದಿದನು ಕವಿ ಐದಾರು ಪದ್ಯಗಳಲ್ಲಿ ಅಕ್ರೂರನು ಕಂಡಿದ್ದನ್ನು "ಕಂಡನಗಣಿತ ಕೋಟಿವಾಣಿಯ ಗಂಡರನು ಶತಕೋಟಿ ರಕ್ಷೋದ್ದಂಡರನು - ನಾಕ ಮೊದಲಾಗಿಹ ಚತುರ್ದಶ ಲೋಕವನು - ಸುರಧೇನು ನಿಕರವ - ಸಮಸ್ತ ದ್ವೀಪಸಾಗರಗಿರಿಗಹನ ನಗರ ಗ್ರಾಮಗಳನು - ಸುರ ನರ ಉರಗಸಿದ್ಧ ವಿದ್ಯಾಧರ ಗರುಡ ಗಂಧರ್ವ ರಾತ್ರಿಂಚರ ಪಿಶಾಚರ ಗಡಣವ - ಹರಿಬಲರು ಗೋವರ ಇತ್ಯಾದಿ ಪದಗಳಲ್ಲಿ ವಿವರಿಸುತ್ತಾನೆ

ಶ್ವೇತ ವರ್ಣದ ಥಳ ಥಳಿಸಿ ಹೊಳೆವ ಸಾವಿರ ಹೆಡೆಗಳ ಶೇಷನಾಗನ ಮೇಲೆ ಪವಡಿಸಿದ ಪಂಕಜಾಕ್ಷನನ್ನು ಅಕ್ರೂರ ಕಂಡ ಆ ದಿವ್ಯ ಪುರುಷನ ಸೌಂದರ್ಯವನ್ನು ಕವಿ ಆರು ಪದ್ಯಗಳಲ್ಲಿ ಸ್ತುತಿಸಿದ್ದಾನೆ ಆ ಚಿದ್ರೂಪನ ಅದ್ಭುತ ರೂಪವನ್ನು ಅಗಣಿತ ವಿಶ್ವರೂಪ ಪರರೂಪವನ್ನು ಜಗದೀಶ್ವರ ಮುಕುಂದನ ಅಂಗಾಂಗಳಲ್ಲಿ ಅಲಂಕೃತವಾದ ದೇದೀಪ್ಯಮಾನವಾದ ಆಭರಣರಾಶಿಗಳನ್ನು ಅಕ್ರೂರ ಕಂಡು ಹರುಷಿತನಾಗಿ ಬೆರಗಾದನು. ಪ್ರಹ್ಲಾದನಾರದ ಭಕ್ತಶ್ರೇಷ್ಠರು ನಿರ್ದುಷ್ಟವಾದ ವೇದಮಂತ್ರಗಳಿಂದ ಭಗವಂತನನ್ನು ಸ್ತೋತ್ರ ಮಾಡುವುದನ್ನು ಕಂಡ ಕವಿ ಸೋಮನಾಥನು ಅಕ್ರೂರನಿಗೆ ಕರುಣಾಳು ಕೃಷ್ಣ ತನ್ನ ವಿಶ್ವರೂಪದರ್ಶನವನ್ನು ನೋಡಲು ದಿವ್ಯ ಚಕ್ಷುವನ್ನು ಕೊಟ್ಟನಂತೆ ಭಕ್ತಿಯಿಂದ ಶರಣಾಗತನಾದ ಅಕ್ರೂರನಿಗೆ-

ಅಕ್ರೂರಹುಲು ಮನುಜ ತಾನೆತ್ತ? ದೊಮ್ಮದ ನೆಲೆಯ ನರಿವುದೆತ್ತ? ಹಂಬಿನ ಮಲಿನ ಮಾನುಷನೆತ್ತ - ಫಣಿಪತಿ ಶಯನ ತಾನೆತ್ತ - ಮಾಧವನ ಬಲವು ಫಲಿಸಿತೆಂದು, ನಾನು ಕೃತಾರ್ತನಾದೆ-ಎಂದು ಸಂತೋಷಪಡುತ್ತಾನೆ. ತಾನು ಹಿಂದಿನ ಜನ್ಮದಲ್ಲಿ ಮಾಡಿದ ಪುಣ್ಯಫಲದ ವಿಶೇಷವೇ ಇದು ಇರಬೇಕು ಎಂಬುವುದಾಗಿ ಹೇಳುವಾಗ ಪುಣ್ಯವಿಶೇಷಗಳನ್ನು ಒಂದು ಸಾಲಾಗಿಯೇ ಅಕ್ರೂರ ಹೇಳುವುದನ್ನು ಕವಿ ಸೋಮನಾದನು ವರ್ಣಿಸುವುದನ್ನು ಸಹೃದಯರೇ ಓದಿ ಆನಂದಿಸಿ-

ಹಿಂದೆ ಜನ್ಮಸಹಸ್ರದಲಿ ಸುರ
ಸಿಂಧುವನು ಸೇವಿಸಿದೆನೋ
ಯತಿ ವೃಂದವನು ಮನ್ನಿಸಿದನೋ
ವೈಷ್ಣವ ಮಹಾಸಭೆಗೆ
ವಂದಿಸಿದೆನೋ ಹರಿದಿನದ ವ್ರತ
ವೊಂದನಾನುತ್ತರಿಸಿದೆನೋ ಎನ
ಗಿಂದು ಹರಿ ಕರುಣಿಸುವ
ದಂದಿನ ಸುಕೃತ ಫಲವೆಂದ
ಅತಿಥಿ ಪೂಜೆಯ ಫಲವೋ ಮೇಣ
ಚ್ಯುತ ಸಮಾರಾಧನೆಯ ಸುಕೃತವೋ
ಶ್ರುತಿ ಪುರಾಣೋತ್ಕೃಷ್ಟ
ಪುಣ್ಯವೋ ಬಹು ವಿಧಾನದಲಿ
ಪಥಿಕರಿಗೆ ಜಲ ವೆರೆದ ಧರ್ಮ
ಪ್ರತತಿಯೋ ವಿವಿಧನ್ನ ದಾನ
ವ್ರತದ ಮಹಿಮೆಯೋ
ಘಟಿಸಿ ತೆನಗಿಷ್ಟಾರ್ಥವೆನುತಿರ್ದ

ಭಗವಂತನ ದಿವ್ಯರೂಪವನ್ನು ನೋಡಿ ಕೈಗಳೆರಡನ್ನು ಜೋಡಿಸಿ ಗದ್ಗದಸ್ವರದಿಂದ ಪರಮಾತ್ಮನನ್ನು ಮೆಲ್ಲ ಮೆಲ್ಲನೆ ಸ್ತೋತ್ರಮಾಡಿದನು ಅಕ್ರೂರ-

ನಿತ್ಯ ಜಯ ದೇವಕಿಯ ಮೋಹದ
ಪತ್ಯ ಜಯ ನಿಸ್ಸಂಗ ನೆನಿಸಿದ
ಸತ್ಯ ಜಯ ಗೋಪಾಲ
ಲೀಲಾ ಭರಿತ ಜಯ ಜಯತು
ಮೃತ್ಯುವಿರಹಿತ ಜಯ ಧನಂಜಯ
ಭೃತ್ಯ ಜಯ ನಿಗಮಾರ್ಥ ನಿತರ
ಸ್ತುತ್ಯ ಜಯ ಗೋಪೀ
ಜನಪ್ರಿಯ ಜಯ ಜಯೆನುತಿರ್ದ

ಹೀಗ ಮುಂದೆ ಐದು ಪದ್ಯಗಳಲ್ಲಿ ಕೃಷ್ಣನ ಸ್ತುತಿ ಮಾಡಿರುತ್ತಾನೆ ದಶಮಸ್ಕಂದ ಅಧ್ಯಾಯ ೪೦ ರಲ್ಲಿ ಬರುವ ಅಕ್ರೂರನು ಮಾಡಿದ ಶ್ರೀಕೃಷ್ಣ ಸ್ತೋತ್ರ-

ನತೋsಸ್ಮ್ಯಹಂ ತ್ವಾಖಿಲತು ಹೇತೂ
ನಾರಾಯಣಂ ಪೂರುಷಮಾದ್ಯ ಮವ್ಯಯಂ
ಯನ್ನಾಭಿಜಾತಾದರವಿಂದ ಕೋಶಾ
ದ್ಬ್ರಹ್ಮಾವಿರಾಸೀದ್ಯತ ಏಷಲೋಕಃ

ಎಂಬುವ ಮೂವತ್ತು ಶ್ಲೋಕಗಳು ಉತ್ತಮ ಶ್ಲೋಕ ರತ್ನಗಳಾಗಿವೆ. ಈ ಮೂವತ್ತು ಶ್ಲೋಕಗಳಲ್ಲಿ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಹೇಳುವ ಪರಾಭಕ್ತಿಯ ತಿರಳು ಇವೆ. ಪಾಂಚರಾತ್ರೆಯ ಉಪದೇಶವಿದೆ ವೈಷ್ಣವ ಆಗಮ ವರಾಹಪುರಾಣ ಇತ್ಯಾದಿಗಳಲ್ಲಿ ತಿಳಿಸಿರುವ ತಪ್ತಮುದ್ರಾಂಕುಶ ಸಂಸ್ಕಾರ ಮಹಿಮೆ ತಿಳಿಸುತ್ತವೆ

ಅನನ್ಯ ಭಕ್ತಿಯಿಂದ ಸ್ತೋತ್ರ ಮಾಡುತ್ತಿದ್ದ ಅಕ್ರೂರನಿಗೆ ನೀರಿನಲ್ಲಿ ತನ್ನ ವಿಶ್ವರೂಪವನ್ನು ತೋರಿಸಿದಮೇಲೆ ಪುನಃ ಆ ಭಗವಂತನು ಗೋಕುಲದ ಶ್ರೀಕೃಷ್ಣನಾಗಿ ಕಾಣಿಸಿಕೊಂಡ. ನೀರಿನಿಂದ ಮುಳುಗೆದ್ದ ಅಕ್ರೂರ ಅಚ್ಚರಿಯಿಂದ ಹೊರಗೆ ರಥದ ಮೇಲೆ ಕೃಷ್ಣ ಬಲರಾಮರನ್ನು ಕಂಡು ರಥವನ್ನು ಮಧುರೆಗೆ ಹೊಯ್ಯಲು ಮಡುವಿನಿಂದ ಹೊರಬಂದ ಮಧ್ಯಾಹ್ನದ ಹೊತ್ತಿಗೆ ಮಾಧವನು ಮಧುರೆಯನ್ನು ಸೇರಿದ ಅಲ್ಲಿ ಉದ್ಯಾನವನದಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದ.

* * *

# ವಾಚಸ್ಪತಿ ಮಿಶ್ರರು

ಪ್ರೊ|| ವಿ. ಎನ್. ಶೇಷಗಿರಿರಾವ್.

ವಾಚಸ್ಪತಿ ಮಿಶ್ರರು ಕ್ರಿ.ಶ ೯ ನೇ ಶತಮಾನದಲ್ಲಿ ಬಿಹಾರ ರಾಜ್ಯದ ಮಿಥಿಲಾ ಪ್ರಾಂತ್ಯದಲ್ಲಿದ್ದವರು. ಅವರು ಉದ್ದಾಮ ಪಂಡಿತರಾಗಿದ್ದರು ಸಚ್ಚಾರಿತ್ರ್ಯವನ್ನೇ ಆಭರಣವನ್ನಾಗಿ ಹೊಂದಿದ್ದವರು. ವಿದ್ಯೆಯನ್ನೇ ಆಸ್ತಿ ಎಂದು ತಿಳಿದಿದ್ದವರು. ಅವರದು ಭಾರತೀಯ ತತ್ವಶಾಸ್ತ್ರದಲ್ಲಿ ಬಹುದೊಡ್ಡ ಹೆಸರು ವೈದಿಕ ದರ್ಶನಗಳನ್ನಷ್ಟೇ ಅಲ್ಲದೆ ಅವೈದಿಕ ದರ್ಶನಗಳನ್ನೂ ಕರತಲಾಮಲಕ ಮಾಡಿಕೊಂಡಿದ್ದವರು. ಷಡ್ದರ್ಶನಗಳಲ್ಲಿ ಒಂದನ್ನು ಉಳಿದು, ಮಿಕ್ಕೆಲ್ಲಾ ದರ್ಶನಗಳನ್ನು ಕುರಿತು, ಅವರು ವಿದ್ವತ್ಪೂರ್ಣ ಭಾಷ್ಯಗಳನ್ನು, ಟೀಕೆ ಟಿಪ್ಪಣಿಗಳನ್ನು, ವಿವರಣಾತ್ಮಕ ಹಾಗೂ ಸೃಜನಾತ್ಮಕ ಬರಹಗಳನ್ನು ನೀಡಿದ್ದಾರೆ ನ್ಯಾಯದರ್ಶನದ ಅಭ್ಯಾಸಿಗಳಿಗೆ ಅವರು ಪ್ರಾತಃಸ್ಮರಣೀಯರಾಗಿದ್ದಾರೆ ಉದ್ಯೋತ್ಕರ ಎಂಬ ಮಹಾ ನ್ಯಾಯಪಂಡಿತರು ಬರೆದಿರುವ 'ನ್ಯಾಯವಾರ್ತಿಕ' ಗ್ರಂಥವನ್ನು ಕುರಿತು 'ನ್ಯಾಯವಾರ್ತಿಕ ತಾತ್ಪರ್ಯ ಟೀಕಾ' ಎಂಬ ಭಾಷ್ಯರೂಪದ ಉದ್ಗ್ರಂಥವನ್ನು ವಾಚಸ್ಪತಿ ಮಿಶ್ರರು ಬರೆದಿದ್ದಾರೆ ಸಾಂಖ್ಯದರ್ಶನವನ್ನು ಕುರಿತು ತತ್ವಕೌಮುದೀ ಎಂಬ ವಿವರಣೆಯನ್ನು ಹಾಗೂ ಯೋಗದರ್ಶನದ ಮೇಲಿನ ವ್ಯಾಸಭಾಷ್ಯದ ಮೇಲೆ ತತ್ವವೈಶಾರದೀ ಎಂಬ ಭಾಷ್ಯವನ್ನು ಮಿಶ್ರರು ಬರೆದಿದ್ದಾರೆ ಪೂರ್ವ ಮಿಮಾಂಸ ದರ್ಶನವನ್ನು ಕುರಿತು ಅವರ ಗ್ರಂಥವೆಂದರೆ 'ತತ್ವ ಬಿಂದು' ಕಡೆಯಲ್ಲಿ ಬ್ರಹ್ಮಸೂತ್ರದ ಶಾಂಕರ ಭಾಷ್ಯದ ಮೇಲೆ 'ಭಾಮತೀ' ಎಂಬ ವ್ಯಾಖ್ಯಾನವನ್ನು ಮಿಶ್ರರು ಬರೆದು ಅತ್ಯಂತ ಪ್ರಸಿದ್ಧಿಯನ್ನು ಪಡೆದರು

ಅವರು ತಮ್ಮ ವೇದಾಂತ ಗ್ರಂಥಕ್ಕೆ 'ಭಾಮತೀ' ಎಂಬ ಹೆಸರನ್ನು ಏಕೆ ಇಟ್ಟರು ಎಂಬುದಕ್ಕೆ ಒಂದು ಐತಿಹ್ಯವುಂಟು ವಾಚಸ್ಪತಿ ಮಿಶ್ರರು ಗೃಹಸ್ಥರು ಅವರ ಹೆಂಡತಿಯ ಹೆಸರು 'ಭಾಮತೀ' ಎಂದು ಅತುಳ ವಿದ್ಯಾಭಿಮಾನಿಯಾದ ಮಿಶ್ರರು ಒಂದಾದ ಮೇಲೆ ಒಂದು, ಮತ್ತೊಂದು ಹೀಗೆ ಗ್ರಂಥಗಳನ್ನು ಬರೆಯುತ್ತಾ ವಿದ್ವದಾರಾಧನೆಯಲ್ಲಿ ಮುಳುಗಿಹೋಗಿದ್ದರು. ತಾವು ಗೃಹಸ್ಥರು, ತಮಗೊಬ್ಬ ಪತ್ನಿ ಇದ್ದಾಳೆ ಎಂಬುದನ್ನು ಮರೆಯುವಷ್ಟು ಗಾಢವಾಗಿತ್ತು ಅವರ ಶಾಸ್ತ್ರಪ್ರೇಮ ಪತಿಪಾರಾಯಣೆಯಾದ ಭಾಮತೀ, ಪತಿಗೆ ತಕ್ಕ ಸತಿಯಾಗಿ, ಆತನ ಶಾಸ್ತ್ರ ಜ್ಞಾನಾಭಿವೃದ್ಧಿಗೆ ಇಂಬುಕೊಟ್ಟು ನಿಂತಳು ಮಿಶ್ರರು ತಮ್ಮ ಕಟ್ಟಕಡೆಯ ಗ್ರಂಥವಾದ ಬ್ರಹ್ಮಸೂತ್ರದ ಶಾಂಕರ ಭಾಷ್ಯದ ಮೇಲಿನ ವ್ಯಾಖ್ಯಾನವನ್ನು ಬರೆದು ಮುಗಿಸಿ ತಲೆ ಎತ್ತಿ ನೋಡಿದರೆ ಎದುರಿಗೆ ಪತ್ನಿ ನಿಂತಿದ್ದಾಳೆ ಕೂದಲೆಲ್ಲಾ ಬೆಳ್ಳಗಾಗಿದೆ, ಮೈ ಚರ್ಮ ಸುಕ್ಕುಗಟ್ಟಿದೆ. ಸಂಸಾರ ಸುಖವನ್ನು ಪತ್ನಿಗೆ ನೀಡಲಾಗಲಿಲ್ಲವೆಂಬ ಅಪರಾಧಿಭಾವನೆ ಮಿಶ್ರರನ್ನು ಕಾಡತೊಡಗಿತು ಹೆಂಡತಿಯ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಂದ ಬರಬಹುದಾದ ಕೀರ್ತಿಗಿಂತಲೂ ಅಧಿಕವಾದ ಯಶಸ್ಸನ್ನು ಹೆಂಡತಿ ಹೊಂದಬೇಕೆಂದು ಮನದಲ್ಲೇ ಸಂಕಲ್ಪಿಸಿದ ಮಿಶ್ರರು ಆಕೆಯ ಹೆಸರನ್ನೇ ತಮ್ಮ ವೇದಾಂತದ ಉದ್ಗ್ರಂಥಕ್ಕೆ ಇಟ್ಟರು; ತನ್ಮೂಲಕ ಆಕೆಯ ಕೀರ್ತಿ ಚಿರಸ್ಥಾಯಿಯಾಗಿ ನೆಲೆನಿಲ್ಲುವಂತೆ ಮಾಡಿದರು 'ಭಾಮತೀ' ವಿದ್ವಜ್ಜನರ ಅಗ್ಗಳಿಕೆಯನ್ನು ಪಡೆದಿದೆ. ೯ ನೇ ಶತಮಾನದಲ್ಲಿ ರೂಪಿತಗೊಂಡ ಈ ಕೃತಿ ಇಂದಿಗೂ ತನ್ನ ಅಚ್ಚಳಿಯದ ಪ್ರಭಾವವನ್ನು ಬೀರುತ್ತಿದೆ. ಅದರ ಮೇಲೆ ಉಪವ್ಯಾಖ್ಯಾನಗಳು ಬರೆಯಲ್ಪಟ್ಟಿವೆ

ವಾಚಸ್ಪತಿ ಮಿಶ್ರರ ಪ್ರಕಾರ ದರ್ಶನಗಳು ಹೊರಟಿರುವುದು ಅಹಂಕಾರ ನಾಶಕ್ಕಾಗಿ, ವಿನಯ ವರ್ಧನೆಗಾಗಿ, ವಿದ್ಯಾ ಸುಪ್ರಸನ್ನತೆಗಾಗಿ. ಒಟ್ಟಿನಲ್ಲಿ ದರ್ಶನಗಳ ಗುರಿ ಶುಷ್ಕಪಾಂಡಿತ್ಯದ ಆರಾಧನೆಯಲ್ಲ! ಕೂದಲೆಳೆಯನ್ನು ಸೀಳುವ ತಾರ್ಕಿಕ ಕಸರತ್ತು ಅಲ್ಲ, ಮಾನವ ಕಲ್ಯಾಣವೇ, ಮಾನವನಲ್ಲಿರುವ ಮೃಗತ್ವದ ನಾಶವೇ - ಅವುಗಳ ಪರಮೋದ್ದೇಶ ಅಂದರೆ ಮಾನವನನ್ನು ಸಂತನನ್ನಾಗಿ, ಸಾಧುವನ್ನಾಗಿ, ಸತ್ಪ್ರಜೆಯನ್ನಾಗಿ ಮಾರ್ಪಡಿಸುವುದು

ಈಗ ಮುಂದಿನ ಪ್ರಶ್ನೆ ಸಂತನ ಲಕ್ಷಣಗಳೇನು? ಉತ್ತರ ಸುಸ್ಪಷ್ಟ, ಸಂತನ ಪ್ರಮುಖ ಲಕ್ಷಣಗಳನ್ನು ಈ ಕೆಳಕಂಡಂತೆ ಹೇಳಬಹುದು

೧) ಅಜಾತಶತ್ರುತ್ವ ಸಂತನಿಗೆ ಎಲ್ಲರೂ ಮಿತ್ರರು, ಎಲ್ಲರಿಗೂ ಸಂತನು ಮಿತ್ರನು ಅವನಿಗೆ ವೈರಿಯೇ ಇಲ್ಲ ಸಕಲರಿಗೂ ಲೇಸನ್ನೇ ಬಯಸುವವನು ಸಂತ, ಕನಸಿನಲ್ಲಿಯೂ ಮತ್ತೊಬ್ಬನಿಗೆ ಕೇಡನ್ನು ಆಲೋಚಿಸದವನು, ಕೇಡನ್ನು ಮಾಡದವನು ಕುಳಿತರೆ, ನಿಂತರೆ ಸದಾ ಒಳ್ಳೆಯದರ ಬಗ್ಗೆಯೇ ಆಲೋಚಿಸುವವನು, ಸದಾ ಒಳ್ಳೆಯದನ್ನು ಮಾಡುವವನು ಸಂತ ಸದಾ ನಿರ್ಮಲ ಮನಸ್ಸನ್ನು ಹೊಂದಿರುತ್ತಾನೆ, ದ್ವೇಷಾಸೂಯೆಗಳು ಅವನ ಹತ್ತಿರ ಸುಳಿಯವು, ಕಪಟ, ಮೋಸಗಳು ಅವನಿಂದ ಬಹುದೂರ! ಸುಖ-ದುಃಖ, ಸೋಲು- ಗೆಲವು ಮುಂತಾದ ದ್ವಂದ್ವಗಳನ್ನು ಮೆಟ್ಟಿನಿಂದ ಸ್ಥಿತಪ್ರಜ್ಞನು, ಅವನು. ಸೇಡು, ಪ್ರತೀಕಾರಗಳ ಗಂಧವಿಲ್ಲದವನು ಅರಿಷಡ್ವರ್ಗಗಳನ್ನು ಪಳಗಿಸಿ ಗೆದ್ದವನು; ದೃಢ ಮನಸ್ಸನ್ನುಳ್ಳವನು, ಮಾನಸಿಕ ದೌರ್ಬಲ್ಯ ನಿರಾಶೆ, ಕೃತ್ರಿಮತೆಗಳಿಗೆ ಅವನಲ್ಲಿ ಎಳ್ಳಷ್ಟೂ ಎಡೆಯಿಲ್ಲ ಒಟ್ಟಿನಲ್ಲಿ ಅವನು ನಿಸ್ವಾರ್ಥಿ, ನಿರಪೇಕ್ಷಜೀವಿ.

ವಾಚಸ್ಪತಿ ಮಿಶ್ರರನ್ನು ಈ ಅರ್ಥದಲ್ಲಿ ಸಂತರೆನ್ನಬಹುದು. ಅವರು ಯಾವ ದರ್ಶನದ ಶತ್ರುವೂ ಅಲ್ಲ. ಎಲ್ಲ ದಾರ್ಶನಿಕರು ಅವರನ್ನು ಪ್ರೀತಿಸುತ್ತಾರೆ, ಅವರ ವಿದ್ವತ್ತನ್ನು ಪ್ರಶಂಸಿಸುತ್ತಾರೆ ಅವರ ಬುದ್ಧಿಮತ್ತೆಯನ್ನು ಚತುರತೆಯನ್ನು ಹಾಡಿ ಹೊಗಳುತ್ತಾರೆ. ಮೇಲಾಗಿ ಅವರದು ನಿರ್ಮಲ ಮನಸ್ಸು, ಗುಣವನ್ನು ಗುಣವೆಂದು, ಅವಗುಣವನ್ನು ಅವಗುಣವೆಂದು ಹೇಳುವ ನಿಚಿತ ಬುದ್ಧಿ ಅವರದು. ಬುದ್ಧಿ ಕೇವಲ ಸೈದ್ಧಾಂತಿಕ ಮಟ್ಟದಲ್ಲೇ ಮೆರೆಯದೆ ನೀತಿ ವೈರಾಗ್ಯಗಳ ಚಕ್ರವರ್ತಿಯಾಗಬೇಕು ಎಂಬುದು ಅವರ ಬೋಧೆ. ಅವರು ಸಂತರಾಗಿ ನಮಗೆ ಕಾಣುವುದು ಈ ದೊಡ್ಡ ಗುಣದಿಂದಲೇ

೨) ಸಂತರ ಮತ್ತೊಂದು ಲಕ್ಷಣ ಅಹಂಕಾರಶೂನ್ಯತೆ ಮತ್ತು ವಿನಯಸಂಪನ್ನತೆ. 'ನಾನು ಬರೆದದ್ದು, ನಾನು ಮಾಡಿದ್ದು, ನಾನು, ನಾನು ಎಂಬುದು ಅಜ್ಞಾನ ಜ್ಞಾನಿಗಳ ಬಗ್ಗೆ, ಗುರುಹಿರಿಯರ ಬಗ್ಗೆ, ಒಳ್ಳೆಯವರ ಬಗ್ಗೆ, ಗೌರವ ಪ್ರೀತಿ ಹಾಗೂ ವಿನಯ, ಸಂತರಲ್ಲಿ ಎದ್ದು ಕಾಣುವ ಲಕ್ಷಣ ತಮ್ಮ ಪರೋಕ್ಷ ಗುರುಗಳಾದ ಶಂಕರಾಚಾರ್ಯರನ್ನು ಕುರಿತು ಅವರು ಹೇಳುವ ಮಾತು ಮನನೀಯ 'ವಿಜ್ಞಾನಂ ಶಂಕರಂ ಕರುಣಾಕರಂ'

ಶಂಕರರದು ನಿಶಿತ ಜ್ಞಾನ; ಸತ್ಯದ ಅಂತರಾಳಕ್ಕೆ ಕೊಂಡೊಯ್ಯುವ ಹರಿತ ಮತಿ ಅದು ಅವರ ಬುದ್ಧಿ ಎಷ್ಟು ತೀಕ್ಷ್ಣವೋ, ಅವರ ಹೃದಯ ಅಷ್ಟೇ ಕರುಣಾಮಯ. ಇಡೀ ಜಗತ್ತನ್ನೇ ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು, ಲೋಕಹಿತಕ್ಕಾಗಿ ದುಡಿದ ಚೇತನ ಅದು ಶಂಕರರನ್ನು ಕುರಿತ ಮಿಶ್ರರ ವಿನಯ ಮುಗಿಲು ಮುಟ್ಟುವಂಥದ್ದು "ಬೀದಿ ನೀರು ಗಂಗಾನದಿಯನ್ನು ಸೇರಿ ಪುನೀತವಾಗುವಂತೆ ಶಂಕರಾಚಾರ್ಯರ ಕೃತಿಗಳ ಮಧ್ಯೆ ನನ್ನ ಕೃತಿ ಸೇರಿ ದೋಷವನ್ನು ಕಳೆದುಕೊಂಡು ಪಾವನವಾಗುತ್ತದೆ" ಶಂಕರರ ಬ್ರಹ್ಮಸೂತ್ರ ಭಾಷ್ಯವನ್ನು ಮಿಶ್ರರು 'ಪ್ರಸನ್ನ ಗಂಭೀರಂ' ಎಂದು ಕರೆಯುತ್ತಾರೆ. ಅದರ ಅಧ್ಯಯನದಿಂದ ಅಜ್ಞಾನ ನಿವಾರಣೆಯಾಗಿ ಮನಸ್ಸಿನಲ್ಲಿ ಪ್ರಸನ್ನತೆ ಉಂಟಾಗುತ್ತದೆ ಅದರ ಆಳವನ್ನು ಅಳೆಯಲು ಸಾಧ್ಯವಿಲ್ಲವೆಂದು ಮಿಶ್ರರು ಗುರುಗಳ ಮೇಲಿನ ಅಭಿಮಾನವನ್ನು ಪ್ರೀತಿಯನ್ನೂ ಹೊರಸೂಸುತ್ತಾರೆ.

೩) ಸಂತರ ಮತ್ತೊಂದು ಲಕ್ಷಣವೆಂದರೆ ಸತ್ಯನಿಷ್ಠತೆ, ನ್ಯಾಯಪಕ್ಷಪಾತ ಮತ್ತು ಮಾನವ ಪ್ರೀತಿ ಸತ್ಯ - ನಿಷ್ಠುರವಾದುದು. ಅದು ನಿಷ್ಠುರವಾದಷ್ಟೂ ಅದನ್ನು ಅರಸುವವನ ಪ್ರೀತಿ ಹೆಚ್ಚಾಗುತ್ತದೆ. ದರ್ಶನ ಯಾವುದೇ ಇರಲಿ, ವೈದಿಕವಿರಲಿ, ಅವೈದಿಕವಿರಲಿ, ಭೌತಿಕವಾದವಾಗಿರಲಿ, ಆಧ್ಯಾತ್ಮವಾದವಾಗಿರಲಿ, ಅದು ಸತ್ಯಾಕಾಂಕ್ಷಿಯಾಗಿದ್ದರೆ ಅದನ್ನು ನಾವು ಅರಸಬೇಕು, ಅಧ್ಯಯನ ಮಾಡಬೇಕು ಅದು ಜೈನದರ್ಶನವಾಗಿರಲಿ, ಬೌದ್ಧ ದರ್ಶನವಾಗಿರಲಿ ಇಲ್ಲವೆ ಮತ್ತೊಂದು ದರ್ಶನವಾಗಿರಲಿ, ಅವುಗಳ ಬಗ್ಗೆ ನಮಗೆ ಪ್ರೀತಿಯುಂಟಾಗುವಂತೆ ಮಾಡುತ್ತಾರೆ ವಾಚಸ್ಪತಿ ಮಿಶ್ರರು ಅವರ ಸತ್ಯನಿಷ್ಠುರತೆ ಮೆಚ್ಚುವಂಥಾದ್ದು ಬೌದ್ಧದರ್ಶನದಲ್ಲಾಗಲೀ ಜೈನ ದರ್ಶನದಲ್ಲಾಗಲೀ, ನ್ಯಾಯದರ್ಶನದಲ್ಲಾಗಲೀ ಬಗೆಹರಿಯದ ಸಮಸ್ಯೆಯೊಂದಿದ್ದರೆ, ಆಯಾ ದರ್ಶನದವರು ಅದನ್ನು ಪರಿಹರಿಸುತ್ತಿದ್ದ ರೀತಿ, ವಾಚಸ್ಪತಿ ಮಿಶ್ರರ ಸತ್ಯನಿಷ್ಠೆಯನ್ನೂ ನ್ಯಾಯಪರತೆಯನ್ನು ಸೂಚಿಸುತ್ತದೆ "ಆಗಲಿ, ಆ ಸಮಸ್ಯೆಯನ್ನು ವಾಚಸ್ಪತಿ ಮಿಶ್ರರು ಹೇಗೆ ಪರಿಹರಿಸಿದ್ದಾರೋ ಅದೇ ನಮ್ಮ ಪರಿಹಾರವೂ ಕೂಡ" ಎನ್ನುವರು, ವಿವಿಧ ದರ್ಶನಗಳ ಚಿಂತಕರು. ವಾಚಸ್ಪತಿ ಮಿಶ್ರರ ನ್ಯಾಯಪಕ್ಷಪಾತಕ್ಕೆ ನಿಸ್ವಾರ್ಥತೆಗೆ ಸತ್ಯನಿಷ್ಠೆಗೆ ಇದಕ್ಕಿಂತ ಉತ್ತಮವಾದ ನಿದರ್ಶನವಿಲ್ಲ ಎನ್ನಬಹುದು!

೪) ಸಂತರ ಮತ್ತೊಂದು ಲಕ್ಷಣವೆಂದರೆ ಸೀಮಾತೀತ ಪ್ರೀತಿ ಇಡೀ ಮಾನವತೆಯೇ ಒಂದು ಎಂಬ ಭಾವ ಜಾತಿ, ಮತ, ಕುಲ, ಗೋತ್ರ ಭೇದಗಳು ಕೃತಕವಾದವುಗಳು ಅವುಗಳನ್ನು ಮೆಟ್ಟಿ ನಿಂತು ಮಾನವತೆಯನ್ನು ಪ್ರೀತಿಸಬೇಕು ಈ ಭಾವನೆಗೆ ಅದ್ವೈತತತ್ವವೇ ಮೂಲ ನನ್ನಂತೆಯೇ ಮತ್ತೊಬ್ಬನು, ನನಗೆ ಯಾವುದು ಕೇಡೋ ಅದು ಮತ್ತೊಬ್ಬನಿಗೂ ಕೇಡು; ನನ್ನಲ್ಲಿ ದೈವತ್ವವಿದ್ದರೆ, ಎಲ್ಲರಲ್ಲೂ ಅದು ಇದೆ ನನಗೆ ಸುಖ ಬೇಕಾದರೆ ಮತ್ತೊಬ್ಬರ ದುಃಖವನ್ನು ಕಳೆಯಬೇಕು, ಮತ್ತೊಬ್ಬರ ಅಜ್ಞಾನವನ್ನು ನೀಗಿಸಬೇಕು; ನನ್ನ ಹಿತ ಮತ್ತೊಬ್ಬನಿಗೆ ಹಿತವನ್ನು ಮಾಡುವುದರಲ್ಲಿ ಅಡಗಿದೆ. ಭಿಕ್ಷುಕನಾದರೂ, ನಿರಕ್ಷರಕುಕ್ಷಿಯಾದರೂ ಅವನೂ ನಮ್ಮಂತೆ ಮನುಷ್ಯನಲ್ಲವೇ - ಎಂಬ ಅನುಕಂಪವನ್ನು ಪ್ರತಿಯೊಬ್ಬನೂ ಬೆಳಸಿಕೊಳ್ಳಬೇಕು ತನ್ನಂತೆ ಪರರು ಎಂದು ಭಾವಿಸಿ ಮಾನವ ಕಾರ್ಯಪ್ರವೃತ್ತನಾಗಬೇಕು ಮತ್ತೊಬ್ಬನಿಗೆ ಉಪಕಾರವನ್ನು ಮಾಡಬೇಕೇ ಹೊರತು ಅಪಕಾರ ಸಲ್ಲದು ಮತ್ತೊಬ್ಬನಿಗೆ ಹಿತವನ್ನು ಉಂಟುಮಾಡಬೇಕು, ಆನಂದವನ್ನು ಉಂಟುಮಾಡಬೇಕು; ಉಪೇಕ್ಷೆ, ನಿರ್ಲಕ್ಷ್ಯ ಸಲ್ಲದು ಹೌದು ಈ ನೀತಿಬೋಧೆ ಬರುವುದು, ಆಚರಿಸಲ್ಪಡುವುದು ಕೇವಲ ಸಂತನ ಹೃದಯದಿಂದ, ಈ ಬೋಧೆಗೆ, ಆಚರಣೆಗೆ ಅಡಿಪಾಯವೇ ಅದ್ವೈತ ತತ್ವ. ಈ ತತ್ವವು ವೇದೋಪನಿಷತ್ತುಗಳಲ್ಲಿ ಶತಶತಮಾನಗಳಿಂದ ಪ್ರತಿಪಾದಿತವಾಗಿದೆ ಶಂಕರರು ಅದನ್ನು ಜನಮನದಲ್ಲಿ ನಾಟಿದರು ಆ ಭಾವವನ್ನು ವಾಚಸ್ಪತಿ ಮಿಶ್ರರು ತಮ್ಮ ಭಾಷ್ಯರೂಪದ ಉದ್ಗ್ರಂಥವಾದ 'ಭಾಮತಿ'ಯಲ್ಲಿ ಬಹಳ ಪರಿಣಾಮಕಾರಿಯಾದ ರೀತಿಯಲ್ಲಿ ಎತ್ತಿ ಹಿಡಿದಿದ್ದಾರೆ ಅವರದು ಸಂತರ ಹೃದಯ, ಸಾಧು ಮನಸ್ಸು, ಋಷಿ ಪ್ರಜ್ಞೆ - ಎಂಬುದು ಇದರಿಂದ ವಿದಿತವಾಗುತ್ತದೆ.

೫) ಸಂತರ ಮಗದೊಂದು ಲಕ್ಷಣವೆಂದರೆ ನೈಜವೈರಾಗ್ಯದ ಕಡೆಗೆ ಬಾಗುವುದು ನಿತ್ಯವಾದದ್ದು ಯಾವುದು? ಅನಿತ್ಯವಾದುದು ಯಾವುದು ಎಂಬ ವಿವೇಕ ಜ್ಞಾನ ಮಾನವನಲ್ಲಿದ್ದರೆ ಅವನೂ ಸುಖವಾಗಿರಬಲ್ಲ, ಇತರರನ್ನು ಸುಖಿಯಾಗಿಡಬಲ್ಲ ಜಗತ್ತಿನಲ್ಲಿ ಎಲ್ಲಾ ಅನಾಹುತಗಳು ಸಂಭವಿಸುವುದು ಅವಿವೇಕದಿಂದ! ನನಗೆ ನಿತ್ಯವಾದದ್ದು ಮಾತ್ರ ಬೇಕು, ಅನಿತ್ಯವಾದುದು, ಕ್ಷಣಭಂಗುರವಾದುದು ಬೇಡ ನಿತ್ಯವಾದ ಮೋಕ್ಷಸುಖವನ್ನು ಪಡೆಯಬೇಕೆಂಬ ಆಸೆ ಇರಬೇಕೇ ಹೊರತು, ಈ ಹೊತ್ತು ಇದ್ದು ನಾಳೆ ಇಲ್ಲವಾಗುವ ಪ್ರಾಪಂಚಿಕ ಭೋಗಗಳನ್ನು ಹೊಂದಲು ತವಕಿಸಬಾರದು ಭೋಗಾಪೇಕ್ಷೆಯೇ ಜೀವನದ ಗುರಿಯಾದರೆ ಎಲ್ಲರೂ ಕ್ರಮೇಣ ದುಃಖಿಗಳಾಗಬೇಕಾಗುತ್ತದೆ ಮನಸ್ಸನ್ನು ಎಲ್ಲೆಂದರಲ್ಲಿಗೆ ಹರಿಹಾಯಲು ಬಿಡದೆ ಕಡಿವಾಣ ಹೇರಬೇಕು ಇದನ್ನು ಶಾಸ್ತ್ರಗ್ರಂಥಗಳು ಶಮ ಎನ್ನುವುದನ್ನು ನಮಗೆ ಜ್ಞಾಪಿಸುತ್ತಾರೆ ಹಾಗೆಯೇ ಇಂದ್ರಿಯ ನಿಗ್ರಹವೂ ಅವಶ್ಯಕ. ಕಣ್ಣು ಯಾವಾಗಲೂ ಒಳ್ಳೆಯದನ್ನೇ ನೋಡಬೇಕು, ಕಿವಿ ಯಾವಾಗಲೂ ಒಳ್ಳೆಯದನ್ನೇ ಕೇಳಬೇಕು. ನಿಜವಾದ ಸುಖ ಇಂದ್ರಿಯವ್ಯಾಪಾರದಲ್ಲಿಲ್ಲ; ಇಂದ್ರಿಯ ನಿಗ್ರಹದಲ್ಲಿದೆ ಎಂಬ ಶಾಸ್ತ್ರಗಳ ಅನುಭವಬೋಧೆಯನ್ನು ಮಿಶ್ರರು ನಮಗೆ ನೆನಪಿಸುತ್ತಾರೆ. ಕಷ್ಟಪಡದೆ ಸುಖ ಬಾರದು, ವಿವೇಕವಿಲ್ಲದೆ ಸುಖ ಸಿಗದು ಎಂದು ಹೇಳಿ ಕಷ್ಟಸಹಿಷ್ಣುತೆಯನ್ನು ಮೈಗೂಡಿಸಿಕೊಳ್ಳಬೇಕೆಂದು ಮಿಶ್ರರು ತಿಳಿ ಹೇಳುತ್ತಾರೆ. ಈ ನೀತಿ, ಈ ವೈರಾಗ್ಯಗಳು ಮಿಶ್ರರ ಸಾಧುಹೃದಯದಿಂದ ಹೊರಸೂಸಿ ಮಾನವರ ಶ್ರೇಯೋಭಿವೃದ್ಧಿಗೆ ಕಾರಣವಾಗಿವೆ, ಎಂಬುದರಲ್ಲಿ ಎರಡು ಮಾತಿಲ್ಲ

* * *

[illegible]ಯಿಂದ ಸಂತೋಷ ಕೆಲವರಿಗೆ ಲೋಕದೊಳು
ಧನದಿಂದ ಸಂತೋಷ ಕೆಲವರಿಗೆ ಲೋಕದೊಳು
ವನಿತೆಯಿಂ ಸಂತೋಷ ಕೆಲವರಿಗೆ ಲೋಕದೊಳು
ತನಯರಿಂ ಸಂತೋಷ ಕೆಲವರಿಗೆ ಲೋಕದೊಳು
ಇನಿತು ಸಂತೋಷ ವವರವರಿಗಾಗಲಿ ನಿನ್ನ
ನೆನಹೆನಗೆ ಸುತೋಷ ರಂಗವಿಠಲರೇಯ

-ಶ್ರೀಪಾದರಾಜರು.



# ಕೇನೋಪನಿಷತ್

- ಎಂ. ಸಿ. ರಾಮರಾವ್.

## ಪ್ರಥಮಖಂಡಃ

ಕೇನೇಷಿತಂ ಪತತಿಪ್ರೇಷಿತಂ ಮನಃ
ಕೇನ ಪ್ರಾಣಃ ಪ್ರಥಮಃ ಪ್ರೈತಿ ಯುಕ್ತಃ
ಕೇನೇಷಿತಾಂವಾಚಮಿಮಾಂ ವದಂತಿ
ಚಕ್ಷುಃಶ್ರೋತ್ರಂ ಕ ಉ ದೇವೋ ಯುನಕ್ತಿ 1

ಯಾರ ಆಜ್ಞೆಗೆ ಒಳಪಟ್ಟು ಮನಸ್ಸು ಅದರ ಗುರಿಯನ್ನು ಮುಟ್ಟುತ್ತದೆ? ಯಾರಿಂದ ಹೂಡಲ್ಪಟ್ಟ ಪ್ರಾಣವು ಅದರ ಮಾರ್ಗದಲ್ಲಿ ಮಾತ್ರ ಚಲಿಸಲ್ಪಡುತ್ತಿದೆ? ಯಾರಿಂದ ಪ್ರಚೋದಿಸಲ್ಪಟ್ಟು ಮಾನವರು ಮಾತನಾಡುತ್ತಾರೆ? ಯಾವ ದೇವರು ಕಣ್ಣು ಮತ್ತು ಕಿವಿಗಳಿಗೆ ಅವುಗಳ ಕೆಲಸವನ್ನು ತಿಳಿಸುವನು?

ಶ್ರೋತ್ರಸ್ಯಶ್ರೋತ್ರಂಮನಸೋಮನಸೋಯತ್
ವಾಚೋಹ ವಾಚಂ ಸ ಉ ಪ್ರಾಣಸ್ಯಪ್ರಾಣಃ
ಚಕ್ಷುಷಶ್ಚಕ್ಷುರತಿಮುಚ್ಯಧೀರಾಃ
ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವನ್ತಿ 2

ಅದು 'ಕಿವಿಯ ಕಿವಿ, ಮನಸ್ಸಿನ ಮನಸ್ಸು, ಮಾತಿನ ಮಾತು, ಪ್ರಾಣದ ಪ್ರಾಣ, ಆದ್ದರಿಂದ ವಿವೇಕಿಗಳು ಆತ್ಮನನ್ನು ಈ ಇಂದ್ರಿಯ ಕ್ರಿಯೆಯಿಂದ ದೇರ್ಪಡಿಸಿ, ಇಂದ್ರಿಯ ಜೀವನದಿಂದ ಮೇಲೆದ್ದು ಅಮೃತತತ್ವವನ್ನು ಪಡೆದುಕೊಳ್ಳುತ್ತಾರೆ.

ನ ತತ್ರ ಚಕ್ಷುರ್ಗಚ್ಛತಿ
ನ ವಾಗ್ಗ ಚ್ಛತಿ ನೋ ಮನಃ
ನ ವಿದ್ಮೋ ನ ವಿಜಾನೀಮೋ
ಯಥೈತದನುಶಿಷ್ಯಾತ್ 3

ಅನ್ಯದೇವ ತತ್ ವಿದಿತಾತ್
ಅಥೋ ಅವಿದಿತಾತ್ ಅಧಿ
ಇತಿ ಶುಶ್ರುಮ ಪೂರ್ವೇಷಾಂ
ಯೇ ನಃತತ್ ವ್ಯಾಚಚಕ್ಷಿರೇ 4

ಅಲ್ಲಿಗೆ ಕಣ್ಣು ಹೋಗುವುದಿಲ್ಲ, ವಾಕ್ಕು ಹೋಗುವುದಿಲ್ಲ, ಮನಸ್ಸು ಹೋಗುವುದಿಲ್ಲ ಬ್ರಹ್ಮನು ಹೇಗಿರುವನೆಂದು ನಾವು ಅರಿಯೆವು. ಇದನ್ನು ಹೇಗೆ ತಿಳಿಸಿಕೊಡಬೇಕೋ ಅದನ್ನು ಅರಿಯೆವು. ಆ ಬ್ರಹ್ಮವು ತಿಳಿದಿರುವುದಕ್ಕಿಂತ ಬೇರೆ ಮತ್ತು ತಿಳಿಯದಿರುವುದಕ್ಕಿಂತ ಬೇರೆ; ಯಾರು ನಮಗೆ ಅದನ್ನು ವಿವರಿಸಿದರೋ ಅಂತಹ ಪೂರ್ವಾಚಾರ್ಯರಿಂದ ಹೀಗೆ ಕೇಳಿದ್ದೇವೆ

ಯದ್ವಾಚಾಽನಭ್ಯುದಿತಂ
ಯೇನ ವಾಗಭ್ಯುದ್ಯತೇ
ತದೇವಬ್ರಹ್ಮತ್ವಂ ವಿದ್ಧಿ
ನೇದಂ ಯದಿದಂ ಉಪಾಸತೇ 5

ಯಾವುದು ವಾಕ್ಕಿನಿಂದ ವ್ಯಕ್ತವಾಗುವುದಿಲ್ಲವೋ, ಯಾವುದರಿಂದ ವಾಕ್ಕು ವ್ಯಕ್ತವಾಗುವುದೋ, ಅದನ್ನೇ ನೀನು ಬ್ರಹ್ಮವೆಂದು ತಿಳಿ, ಯಾವುದನ್ನು 'ಇದು' ಎಂದು ಜನರು ಉಪಾಸನೆ ಮಾಡುತ್ತಾರೋ ಅದಲ್ಲ

ಯನ್ಮನಸಾ ನ ಮನುತೇ
ಯೇನಾಹುರ್ ಮನೋ ಮತಂ
ತದೇವ ಬ್ರಹ್ಮತ್ವಂ ವಿದ್ಧಿ
ನೇದಂ ಯದಿದಂ ಉಪಾಸತೇ 6

ಯಾವುದನ್ನು ಮನಸ್ಸಿನಿಂದ ಮನನಮಾಡಲು ಆಗುವುದಿಲ್ಲವೋ, ಯಾವುದರಿಂದ ಮನಸ್ಸು ಮನನಮಾಡಲ್ಪಟ್ಟಿದೆ ಎಂದು ಹೇಳುವರೋ, ಅದನ್ನೇ ನೀನು ಬ್ರಹ್ಮವೆಂದು ತಿಳಿ ಯಾವುದನ್ನು 'ಇದು' ಎಂದು ಜನರು ಉಪಾಸನೆಮಾಡುತ್ತಾರೆಯೋ ಅದಲ್ಲ

ಯಚ್ಚಕ್ಷುಷಾ ನ ಪಶ್ಯತಿ
ಯೇನ ಚಕ್ಷೂಂಷಿ ಪಶ್ಯತಿ
ತದೇವ ಬ್ರಹ್ಮತ್ವಂ ವಿದ್ಧಿ
ನೇದಂ ಯದಿದಂ ಉಪಾಸತೇ 7

ಯಾವುದನ್ನು ಕಣ್ಣಿನಿಂದ ನೋಡುವುದಿಲ್ಲವೋ, ಯಾವುದರಿಂದ ಕಣ್ಣುಗಳನ್ನು ನೋಡುತ್ತೇವೆಯೋ ಅದನ್ನೇ ನೀನು ಬ್ರಹ್ಮವೆಂದು ತಿಳಿ ಯಾವುದನ್ನು 'ಇದು' ಎಂದು ಜನರು ಉಪಾಸನೆ ಮಾಡುತ್ತಾರೋ ಅದಲ್ಲ

ಯಚ್ಛ್ರೋತ್ರೇಣ ನ ಶೃಣೋತಿ
ಯೇನ ಶ್ರೋತ್ರಂ ಇದಂ ಶ್ರುತಂ
ತದೇವ ಬ್ರಹ್ಮತ್ವಂ ವಿದ್ಧಿ
ನೇದಂ ಯದಿದಂ ಉಪಾಸತೇ 8

ಯಾವುದನ್ನು ಕಿವಿಯಿಂದ ಕೇಳುವುದಿಲ್ಲವೋ, ಯಾವುದರಿಂದ ಕಿವಿಯು ಕೇಳಲ್ಪಡುವುದೋ ಅದನ್ನೇ ನೀನು ಬ್ರಹ್ಮವೆಂದು ತಿಳಿ ಯಾವುದನ್ನು 'ಇದು' ಎಂದು ಜನರು ಉಪಾಸನೆಮಾಡುತ್ತಾರೋ ಅದಲ್ಲ

ಯತ್ ಪ್ರಾಣೇನ ಪ್ರಾಣಿತಿ
ಯೇನ ಪ್ರಾಣಃ ಪ್ರಣೀಯತೇ
ತದೇವ ಬ್ರಹ್ಮತ್ವಂ ವಿದ್ಧಿ
ನೇದಂ ಯದಿದಂ ಉಪಾಸತೇ 9

ಯಾವುದನ್ನು ಘ್ರಾಣಶಕ್ತಿಯಿಂದ ವ್ಯಕ್ತಪಡಿಸಲು ಸಾಧ್ಯವಿಲ್ಲವೋ, ಆದರೆ ಯಾವುದು ಘ್ರಾಣವನ್ನು ವ್ಯಕ್ತಪಡಿಸುವುದೋ ಅದನ್ನೇ ನೀನು ಬ್ರಹ್ಮವೆಂದು ತಿಳಿ ಯಾವುದನ್ನು 'ಇದು' ಎಂದು ಜನರು ಉಪಾಸನೆ ಮಾಡುತ್ತಾರೋ ಅದಲ್ಲ

## ದ್ವಿತೀಯಖಂಡಃ

ಯದಿ ಮನ್ಯಸೇ ಸುವೇದೇತಿ ದಭ್ರಮೇವಾಪಿ
ನೂನಂ ತ್ವಂ ವೇತ್ಥ ಬ್ರಹ್ಮಣೋ ರೂಪಂ
ಯದಸ್ಯ ತ್ವಂ ಯದಸ್ಯ ದೇವೇಷ್ವಥನು
ಮೀಮಾಂಸ್ಯಮೇವ ತೇ ಮನ್ಯೇ ವಿದಿತಂ 1

ನೀನು ಬ್ರಹ್ಮವನ್ನು ಚೆನ್ನಾಗಿ ತಿಳಿದಿರುವುದಾಗಿ ಭಾವಿಸಿದ್ದರೆ, ನೀನು ತಿಳಿದಿರುವುದು ಸ್ವಲ್ಪವೇ ಏಕೆಂದರೆ ಜೀವಿಗಳಾಗಿ ಅಥವಾ ದೇವತೆಗಳಾಗಿ ತೋರುತ್ತಿರುವ ಈ ರೂಪಗಳು ಉಪಾಧಿಯಿಂದ ಕೂಡಿದ ಬ್ರಹ್ಮದ ರೂಪ ಹೀಗಾಗಿ ಅದು ಅಲ್ಪ. ಆದ್ದರಿಂದ ಬ್ರಹ್ಮವನ್ನು ಕುರಿತು ನೀನು ಇನ್ನೂ ಹೆಚ್ಚು ವಿಚಾರಮಾಡಬೇಕಾಗುತ್ತದೆ

ನಾಹಂ ಮನ್ಯೇ ಸುವೇದೇತಿ,
ನೋ ನ ವೇದೇತಿ ವೇದ ಚ
ಯೋ ನಃ ತದ್ವೇದ ತದ್ವೇದ
ನೋ ನ ವೇದೇತಿ ವೇದ ಚ 2

ನಾನು ಚೆನ್ನಾಗಿ ತಿಳಿದಿದ್ದೇನೆ ಎಂದು ಭಾವಿಸುವುದಿಲ್ಲ. ಅದು ನನಗೆ ತಿಳಿದಿಲ್ಲ ಎಂದೂ

ಭಾವಿಸುವುದಿಲ್ಲ ಅದು ತಿಳಿದಿಲ್ಲದ್ದು ಮತ್ತು ತಿಳಿದಿರುವುದು ಇವೆರಡಕ್ಕಿಂತ ಬೇರೆ ಎಂಬುದನ್ನು ನಮ್ಮಲ್ಲಿ ಯಾವನು ಅರಿತಿದ್ದಾನೋ ಅವನು ಮಾತ್ರ ಅದನ್ನು ಬಲ್ಲವನು

ಯಸ್ಯಾಮತಂ ತಸ್ಯ ಮತಂ
ಮತಂ ಯಸ್ಯ ನ ವೇದಸಃ
ಅವಿಜ್ಞಾತಂ ವಿಜಾನತಾಂ
ವಿಜ್ಞಾತಂ ಅವಿಜಾನತಾಂ 3

ಅದನ್ನು ತಿಳಿದವನಿಗೆ ಅದು ತಿಳಿಯದು, ಯಾರಿಗೆ ಅದು ತಿಳಿದಿಲ್ಲವೋ ಅವನಿಗೆ ಅದು ತಿಳಿದಿದೆ, ನಿಜವಾದ ಜ್ಞಾನಿಗೆ ಅದು "ತಿಳಿಯದೇ ಇರತಕ್ಕದ್ದು" ಅಜ್ಞಾನಿಗಾದರೋ ಅದು ತಿಳಿದಿರುವುದು

ಪ್ರತಿಬೋಧವಿದಿತಂ ಮತಂ
ಅಮೃತತ್ವಂ ಹಿ ವಿಂದತೇ
ಆತ್ಮನಾ ವಿಂದತೇ ವೀರ್ಯಂ
ವಿದ್ಯಯಾ ವಿನ್ದತೇ ಅಮೃತಂ 4

ಯಾರು ಪ್ರತಿಯೊಂದು ಜ್ಞಾನ ಜಾಗೃತಿಗಳ ಮಿಡಿತದಲ್ಲಿಯೂ ಬ್ರಹ್ಮವನ್ನು ತಿಳಿಯುತ್ತಾನೆಯೋ, ಅವನು ಅಮೃತತ್ವವನ್ನು ಪಡೆಯುತ್ತಾನೆ ಆತ್ಮನಿಂದ ಆತ ವೀರ್ಯವನ್ನು ಪಡೆಯುತ್ತಾನೆ ಆತ್ಮವಿಷಯವಾದ ವಿದ್ಯೆಯಿಂದ ಅಮೃತತ್ವವನ್ನು ಪಡೆಯುತ್ತಾನೆ

ಇಹ ಚೇದವೇದೀದಥ ಸತ್ಯಮಸ್ತಿ
ನ ಚೇದಿಹಾವೇದೀನ್ಮಹತೀ ವಿನಷ್ಟಿಃ
ಭೂತೇಷು ಬೂ ತೇಷು ವಿಚಿತ್ಯ ಧೀರಾಃ
ಪ್ರೇತ್ಯಾ ಸ್ಮಾಲ್ಲೋಕಾದಮೃತಾ ಭವನ್ತಿ 6

ಮಾನವರ ಶಿಕ್ಷಣದ ಪರಾಕಾಷ್ಠೆ ಇಲ್ಲೇ ಈಗಲೇ ಸಾಕ್ಷಾತ್ಕಾರಮಾಡಿಕೊಳ್ಳುವುದು ಎನ್ನುವಂತಿದೆ ಇದು ಒಂದು ಭ್ರಮೆ ಎಂದರಿತು ಮುಂದುವರಿಯಲು ನಿರಾಕರಿಸಿದರೆ ಅವನಿಗಾಗುವ ನಷ್ಟ ಮಹತ್ ಪ್ರಮಾಣದ್ದು ಜ್ಞಾನಿಗಳು ಸಕಲ ಚರಾಚರ ಸೃಷ್ಟಿಯಲ್ಲೂ ಬ್ರಹ್ಮನನ್ನೇ ಕಾಣುತ್ತಾರೆ ಅಂತಹವರು ಈ ಲೋಕದಿಂದ ಕಣ್ಮರೆಯಾದಾಗ ಅಮೃತತ್ವವನ್ನು ಪಡೆಯುತ್ತಾರೆ

## ತೃತೀಯಖಂಡಃ

ಬ್ರಹ್ಮ ಹ ದೇವೇಭ್ಯೋ ವಿಜಿಗ್ಯೇ, ತಸ್ಯ
ಹ ಬ್ರಹ್ಮಣೋ ವಿಜಯೇ
ದೇವಾ ಅಮಹೀಯಂತ
ತ ಐಕ್ಷಂತಾಸ್ಮಾಕಮೇವಾಯಂ
ವಿಜಯೋಽಸ್ಮಾಕಮೇವಾಯಂ ಮಹಿಮೇತಿ1

ದೇವತೆಗಳಿಗೆ ಬ್ರಹ್ಮವು ಜಯವನ್ನು ಗಳಿಸಿಕೊಟ್ಟಿತು ಬ್ರಹ್ಮದಿಂದ ಜಯವು ದೊರೆತಿದ್ದರೂ ಅದರಿಂದ ಉಬ್ಬಿದ ದೇವತೆಗಳು "ಈ ವಿಜಯವು ನಮ್ಮದೇ, ಈ ಮಹಿಮೆಯೂ ನಮ್ಮದೇ" ಹೀಗೆ ಭಾವಿಸಿದರು

ತದ್ಧೈಷಾಂ ವಿಜಜ್ಞೌ:
ತೇಭ್ಯೋ ಹ ಪ್ರಾದುರ್ಬಭೂವ
ತತ್ ನವ್ಯಜಾನತ
ಕಿಮಿದಂ ಯಕ್ಷಮಿತಿ 2

ಬ್ರಹ್ಮವು ಇವರ ತಪ್ಪು ಭಾವನೆಯನ್ನು ಮತ್ತು ಅಹಂಕಾರವನ್ನು ತಿಳಿದುಕೊಂಡಿತು. ಅವರ ಮುಂದೆ ಕಾಣಿಸಿಕೊಂಡಿತು ಆ ಯಕ್ಷವು ಯಾರು ಎಂಬುದು ಅವರಿಗೆ ತಿಳಿಯಲಿಲ್ಲ.

ತೇಽಗ್ನಿಮಬ್ರುವ್ರ ಜಾತವೇದ,
ಏತ ದ್ವಿಜಾನೀಹಿ
ಕಿಮೇತದ್ಯಕ್ಷಮಿತಿ,
ತಥೇತಿ 3

ಅವರು ಅಗ್ನಿಯನ್ನು ಕುರಿತು ಹೇಳಿದರು "ಹೇ ಜಾತವೇದ, ಈ ಯಕ್ಷವು ಯಾವುದೆಂಬುದನ್ನು ತಿಳಿ?" ಹಾಗೆಯೇ ಆಗಲಿ ಎಂದು ಅಗ್ನಿಯು ಹೇಳಿ ತನಗೆ ವಿಧಿಸಿದ ಕೆಲಸಕ್ಕಾಗಿ ಆತನು ಹೊರಟನು

ತದಭ್ಯದ್ರವತ್ ತಮಭ್ಯವದತ್
ಕೋಽಸೀತಿ, ಅಗ್ನಿರ್ವಾ
ಅಹಮಸ್ಮಿ ಇತ್ಯಬ್ರವೀತ್,
ಜಾತವೇದಾ ವಾ ಅಹಮಸ್ಮೀತಿ 4

ಅಗ್ನಿಯು ಅದರ ಸಮೀಪಕ್ಕೆ ಓಡಿದನು "ನೀನು ಯಾರು" ಎಂದು ಅಗ್ನಿಯನ್ನು ಯಕ್ಷವು ಪ್ರಶ್ನಿಸಿತು "ನಾನು ಜಾತವೇದನಾಗಿದ್ದೇನೆ, ಸಾಕ್ಷಾತ್ ಅಗ್ನಿಯಾಗಿದ್ದೇನೆ" ಎಂದು ಉತ್ತರವನ್ನು ನೀಡಿದನು

ತಸ್ಮಿನ್ ತ್ವಯಿ ಕಿಂ ವೀರ್ಯಂ ಇತಿ,
ಅಪಿ ಇದಂ
ಸರ್ವಂ ದಹೇಯಂ
ಯದಿದಂ ಪೃಥಿವ್ಯಾಂ ಇತಿ 5

"ಅಂತಹ ಪ್ರಖ್ಯಾತವಾದ ಯಾವ ವೀರ್ಯವು ನಿನ್ನಲ್ಲುಂಟು?" ಎಂದು ಯಕ್ಷನು ಕೇಳಿದನು ಈ ಭೂಮಿಯಲ್ಲಿ ಏನೇನಿದೆಯೋ ಅವೆಲ್ಲವನ್ನೂ ನಾನು ಸುಡಬಲ್ಲೆನು ಎಂದು ಅಗ್ನಿಯು ಉತ್ತರ ಕೊಟ್ಟನು.

ತಸ್ಮೈತೃಣಂ ನಿದಧೌ ಏತತ್ ದಹೇತಿ,
ತದುಪಪ್ರೇಯಾಯ ಸರ್ವಜವೇನ,
ತನ್ನ ಶಶಾಕದಗ್ದುಂ, ಸ ತತ ಏನ ನಿವವೃತ್ತೇ,
ನೈತದಶಕಂ ವಿಜ್ಞಾತುಂ ಯದೇತದ್ಯಕ್ಷಮಿತಿ

'ಇದನ್ನು ಸುಡು' ಎಂದು ಅವನ ಎದುರಿಗೆ ಒಂದು ಹುಲ್ಲುಕಡ್ಡಿಯನ್ನು ಯಕ್ಷವು ಇಟ್ಟಿತು. ಅಗ್ನಿಯು ಸರ್ವವೇಗದಿಂದಲೂ ಅದರ ಬಳಿಗೆ ಓಡಿದನು, ಅದನ್ನು ಸುಡಲು ಶಕ್ತನಾಗಲಿಲ್ಲ ಅವನು ಅಲ್ಲಿಂದಲೇ ಹಿಂತಿರುಗಿದನು ಇದು ಯಾವ ಯಕ್ಷವು ಎಂಬುದನ್ನು ನಾನು ತಿಳಿಯಲು ಶಕ್ತನಾಗಲಿಲ್ಲ ಎಂದು ದೇವತೆಗಳಿಗೆ ಹೇಳಿದನು.

ಅಥ ವಾಯುಮಬ್ರುವನ್,
ವಾಯವ ಏತತ್ ವಿಜಾನೀಹಿ
ಕಿಂ ಏತತ್ ಯಕ್ಷಂ ಇತಿ ತಥೇತಿ 7

ಆನಂತರ ವಾಯುವನ್ನು ಕುರಿತು ದೇವತೆಗಳು "ಹೇ ವಾಯು ಈ ಯಕ್ಷವುಯಾರು ಎಂಬುದನ್ನು ತಿಳಿದುಕೊ" ಎಂದು ಹೇಳಲು ಹಾಗೆಯೇ ಆಗಲೆಂದು ವಾಯುವು ಹೇಳಿದನು

ತದಭ್ಯದ್ರವತ್ತ ಮಭ್ಯವದತ್
ಕೋಽಸೀತಿ ವಾಯುರ್ವಾ
ಅಹಮಸ್ಮೀತ್ಯಬ್ರವೀನ್ಮಾ
ತರಿಶ್ವಾ ವಾ ಅಹಮಸ್ಮೀತಿ 8

ವಾಯುವು ಅದರ ಸಮೀಪಕ್ಕೆ ಓಡಿದನು "ನೀನು ಯಾರು" ಎಂದು ಅವನನ್ನು ಯಕ್ಷವು ಪ್ರಶ್ನಿಸಿತು "ನಾನು ವಾಯುವೇ ಆಗಿರುವೆನು ಮಾತರಿಶ್ವನೇ ಆಗಿರುವೆನು" ಎಂದು ಹೇಳಿದನು

ತಸ್ಮಿ ಸ್ತ್ವಯಿ ಕಿಂ
ವೀರ್ಯಮಿತ್ಯಪೀದಂ
ಸರ್ವಮಾದದೀಯ
ಯದಿದಂ ಪೃಥಿವ್ಯಾಮಿತಿ 9

"ನಿನ್ನಲ್ಲಿ ಅಂತಹ ಯಾವ ವೀರ್ಯ ಉಂಟು" ಎಂದು ಯಕ್ಷವು ಪ್ರಶ್ನಿಸಲು ವಾಯುವು "ಈ ಭೂಮಿಯಲ್ಲಿ ಏನೇನಿದೆಯೋ ಅವೆಲ್ಲವನ್ನೂ ಎತ್ತಬಲ್ಲೆನು" ಎಂದು ಹೇಳಿದನು

ತಸ್ಮೈ ತೃಣಂ ನಿದಧೌ, ಏತತ್
ಅಧತ್ಸ್ವೇತಿತದುಪಪ್ರೇಯಾಯಸರ್ವಜವೇನ
ತನ್ನಶಶಾಕಆದಾತುಂಸತತ ಏವನಿವವೃತೇ,
ನೈತದಶಕಂ ವಿಜ್ಞಾತುಂ ಯದೇ ತದ್ಯಕ್ಷಮಿತಿ 10

ಆಗ ಯಕ್ಷವು ಒಂದು ಹುಲ್ಲುಕಡ್ಡಿಯನ್ನಿಟ್ಟು "ಇದನ್ನು ಎತ್ತು" ಎಂದು ಹೇಳಿತು ಆಗ ವಾಯುವು ತನ್ನ ಸರ್ವವೇಗದಿಂದ ಅದರ ಬಳಿಗೆ ಓಡಿದನು ಆದರೂ ಅದನ್ನು ಎತ್ತಲು ಶಕ್ತನಾಗಲಿಲ್ಲ ಅವನು ಅಲ್ಲಿಂದಲೇ ಹಿಂತಿರುಗಿದನು. ಇದು ಯಾವ ಯಕ್ಷನು ಎಂದು ನನಗೆ ತಿಳಿದುಕೊಳ್ಳಲಾಗಲಿಲ್ಲ ಎಂದು ದೇವತೆಗಳಿಗೆ ಹೇಳಿದನು

ಅಥೇಂದ್ರಮಬ್ರುವನ್,
ಮಘವನ್ನೇ ತತ್ ವಿಜಾನೀಹಿ,
ಕಿಂ ಏತದ್ಯಕ್ಷಂ ಇತಿ ತಥೇತಿ,
ತದಭ್ಯದ್ರವತ್, ತಸ್ಮಾತ್ತಿ ರೋದಧೇ 11

ಅನಂತರ ಅವರು ಇಂದ್ರನನ್ನು ಕುರಿತು "ಹೇ ಮಘವಂತನೇ ಈ ಯಕ್ಷವು ಯಾವುದೆಂಬುದನ್ನು ತಿಳಿದುಕೋ" ಎಂದು ಹೇಳಿದರು ಇಂದ್ರನು "ಹಾಗೆಯೇ ಆಗಲಿ" ಎಂದು ಹೇಳಿ ಅದರ ಸಮೀಪಕ್ಕೆ ಹೋದನು ಅದು ಅವನಿಂದ ಮರೆಯಾಯಿತು

ಸ ತಸ್ಮಿನ್ನೇವ ಆಕಾಶೇ ಸ್ತ್ರಿಯಮಾಜಗಾಮ
ಬಹುಶೋಭಮಾನಾಂ
ಉಮಾಂ ಹೈಮವತೀಂ, ತಾಂ
ಹೋವಾಚ, ಕಿಮೇತ ದ್ಯಕ್ಷಮಿತಿ 12

ಅದಕ್ಕೆ ಬದಲಾಗಿ ಆ ಸ್ಥಳದಲ್ಲಿ ಇಂದ್ರನು ಬಹು ಶೋಭೆಯುಳ್ಳವಳೂ, ಹಿಮವಂತನ ಪುತ್ರಿಯೂ ಆದ ಉಮೆಯನ್ನು ಕಂಡನು ಇಂದ್ರನು ಆಕೆಯನ್ನು ಕುರಿತು "ಈ ಯಕ್ಷವು ಯಾವುದು?" ಎಂದು ಕೇಳಿದನು

## ಚತುರ್ಥ ಖಂಡಃ

ಸಾ ಬ್ರಹ್ಮೇತಿ ಹೋ ವಾಚ,
ಬ್ರಹ್ಮಣೋ ವಾ ಏತದ್ವಿಜಯೇ
ಮಹೀಯದ್ಧ್ವಮಿತಿ ತತೋ
ಹೈವ ವಿದಾಂ ಚಕಾರ ಬ್ರಹ್ಮೇತಿ

ಆಗ ಉಮೆಯು ಹೇಳಿದಳು - "ಎಲೈ ಇಂದ್ರನೇ ಅದು ಬ್ರಹ್ಮವು ಬ್ರಹ್ಮದ ಜಯದಲ್ಲೇ ನೀವು ಹೀಗೆ ಮಹಿಮೆಯನ್ನು ಹೊಂದಿದಿರಿ" ಅದರಿಂದಲೇ ಇಂದ್ರನು ಅದು ಬ್ರಹ್ಮವೆಂದು ತಿಳಿದುಕೊಂಡನು.

ತಸ್ಮಾದ್ವಾ ಏತದೇವಾ ಅತಿತರಾಮಿವಾನ್ಯಾನ್
ದೇವಾನ್
ಯದಗ್ನಿರ್ವಾಯುರಿಂದ್ರಸ್ತೇಹ್ಯೇ
ನನ್ನೇದಿಷ್ಟಂ ಪಸ್ಪಶುಸ್ತೇ
ಹ್ಯೇನತ್ ಪ್ರಥಮೋ ವಿದಾಂ ಚಕಾರ ಬ್ರಹ್ಮೇತಿ 2

ಆದುದರಿಂದ ಅಗ್ನಿ, ವಾಯು, ಇಂದ್ರ ಎಂಬ ಈ ದೇವತೆಗಳು ಇತರ ದೇವತೆಗಳನ್ನು ಮೀರಿರುತ್ತಾರೆ ಏಕೆಂದರೆ ಅವರು ಇದನ್ನು ಅತ್ಯಂತ ಹತ್ತಿರದಿಂದ ಮುಟ್ಟಿದರು ಮತ್ತು ಇದನ್ನು ಬ್ರಹ್ಮವೆಂದು ಮೊದಲನೆಯವರಾಗಿ ತಿಳಿದುಕೊಂಡರು

ತಸ್ಮಾದ್ವಾ ಇಂದ್ರೋತಿತರಾಮಿ
ವಾನ್ಯಾನ್ ದೇವಾನ್, ಸಹ್ಯೇ
ನನ್ನೇದಿಷ್ಟಂ ಪಸ್ಪರ್ಶ, ಸಹ್ಯೇನತ್
ಪ್ರಥಮೋ ವಿದಾಂ ಚಕಾರ ಬ್ರಹ್ಮೇತಿ 3

ಅದರಲ್ಲೂ ಇಂದ್ರನು ಇತರ ದೇವತೆಗಳನ್ನು ಮೀರಿರುತ್ತಾನೆ ಏಕೆಂದರೆ ಅವನು ಇದನ್ನು ಅತ್ಯಂತ ಹತ್ತಿರದಿಂದ ಮುಟ್ಟಿದನು ಮತ್ತು ಇದನ್ನು ಬ್ರಹ್ಮವೆಂದು ಮೊದಲನೆಯವನಾಗಿ ತಿಳಿದುಕೊಂಡನು.

ತಸ್ಯೈಷಆದೇಶೋ ಯದೇತ
ದ್ವಿದ್ಯುತೋ ವ್ಯದ್ಯುತದಾ
ಇತೀನ್ನ್ಯಮೀಮಿಷದಾ
ಇತ್ಯಧಿದೈವತಂ 4

ಆ ಬ್ರಹ್ಮದ ವಿಷಯದಲ್ಲಿ ಈ ಉಪದೇಶ ಉಂಟು, ಅದು ಮಿಂಚಿನ ಹೊಳಪಿನಂತೆ, ಕಣ್ಣು ಮಿಟುಕಿಸಿದಂತೆ ಇಮ ಅಧಿದೈವತದ ವಿಷಯ, ವಿಶ್ವ ಅಭಿವ್ಯಕ್ತಿಯ ಮುಖ

ಅಥಾಧ್ಯಾತ್ಮಂ ಯದೇತದ್ಗಚ್ಛತೀ
ಚ ಮನೋಽನೇನ
ಚೈತ ದುಪಸ್ಮರತ್ಯ ಭೀಕ್ಷ್ಣಂ ಸಂಕಲ್ಪಃ 5

ಈಗ ಆಧ್ಯಾತ್ಮವನ್ನು ಕುರಿತಂತೆ ಅದರ ವರ್ಣನೆ, ಮನಸ್ಸು ಬ್ರಹ್ಮದ ಸಮೀಪಕ್ಕೆ ಶೀಘ್ರವಾಗಿಯೋ ಎಂಬಂತೆ ಹೋಗುತ್ತದೆ ಸಾಧಕನು ಮನಸ್ಸಿನಿಂದ ಇದನ್ನು ಚೆನ್ನಾಗಿ ಸ್ಮರಿಸಿದಂತೆ, ಯಾವಾಗಲೂ ಬ್ರಹ್ಮವು ಹತ್ತಿರದಲ್ಲೇ ಇರುವಂತೆ ಕಲ್ಪಿಸಿಕೊಂಡಂತೆ ಇದೆ

ತದ್ಧ ತದ್ವನಂ ನಾಮ, ತದ್ವನಮಿತ್ಯು
ಪಾಸಿತವ್ಯಂ ಸಯ ಏತದೇವಂ
ವೇದಾಭಿಹೈನಂ ಸರ್ವಾಣಿ
ಭೂತಾನಿ ಸಂವಾಂಛನ್ತಿ 6

ಬ್ರಹ್ಮವು 'ತದ್ವನಂ' ಎಂಬ ಹೆಸರಿನಿಂದ ಪ್ರಖ್ಯಾತವಾಗಿದೆ ಆದ್ದರಿಂದ ತದ್ವನಂ ಎಂದು ಅದನ್ನು ಭಾವಿಸಿ ಧ್ಯಾನಿಸಬೇಕು ಆದ್ದರಿಂದ ಅದು ಅತ್ಯಂತ ಉಪಾಸನೀಯವಾದದ್ದು ಮತ್ತು ಅತ್ಯಂತ ಪೂಜನೀಯವಾದದ್ದು

ಉಪನಿಷದಂ ಭೋ ಬ್ರೂಹಿ
ಇತಿ ಉಕ್ತಾತ ಉಪನಿಷತ್
ಬ್ರಾಹ್ಮಿಂ ವಾವ ತ
ಉಪನಿಷದಮಬ್ರೂಮೇತಿ 7

"ಸ್ವಾಮಿ ಉಪನಿಷತ್ತನ್ನು ಬೋಧಿಸಿರಿ" ಎಂದು ಶಿಷ್ಯನು ಕೇಳುತ್ತಾನೆ 'ನಿನಗೆ ಉಪನಿಷತ್ತು ಬೋಧಿಸಲ್ಪಟ್ಟಿತು ಬ್ರಹ್ಮನಿಗೆ ಸಂಬಂಧಿಸಿದ ಉಪನಿಷತ್ತನ್ನೇ ನಿನಗೆ ಬೋಧಿಸಿದ್ದೇವೆ' ಎಂದು ಆಚಾರ್ಯರು ತಿಳಿಸುತ್ತಾರೆ

ತಸ್ಯೈ ತಪೋ ದಮಃ
ಕರ್ಮೇತಿ ಪ್ರತಿಷ್ಠಾ
ವೇದಾಃ ಸರ್ವಾಂಗಾನಿ;
ಸತ್ಯಮಾಯತನಂ

ಅದಕ್ಕೆ ಎಂದರೆ ಉಪನಿಷತ್ತಿಗೆ ತಪಸ್ಸು, ಸಂಯಮ, ಕರ್ಮ - ಇವೆಲ್ಲಾ ಪೋಷಕಗಳು. ಹಾಗೆಯೇ ವೇದಗಳು, ಅದರ ಅಂಗಗಳು ಸತ್ಯವು ಅದರ ನೆಲೆ

ಯೋವಾ ಏತಾಂ ಏವಂ ವೇದ,
ಅಪಹತ್ಯ ಪಾಪ್ಮಾನಂ
ಅನನ್ತೇ ಸ್ವರ್ಗೇ ಲೋಕೇಜ್ಯೇಯೇ
ಪ್ರತಿತಿಷ್ಠತಿ ಪ್ರತಿತಿಷ್ಠತಿ

ಯಾರು ಹೀಗೆ ಬ್ರಹ್ಮಜ್ಞಾನವನ್ನು ಪಡೆಯುತ್ತಾರೆಯೋ ಅವರು ಪಾಪದಿಂದ ನಿವೃತ್ತರಾಗುತ್ತಾರೆ ಅನಂತ ಆನಂದಮಯವೂ, ಅತ್ಯುಚ್ಚವೂ ಆದ ಬ್ರಹ್ಮದಲ್ಲಿ ಚೆನ್ನಾಗಿ ಸ್ಥಾಪಿತರಾಗುತ್ತಾರೆ

ಕೇನೋಪನಿಷತ್ ಸಮಾಪ್ತಃ

(ಮುಂದಿನ ತಿಂಗಳು ಕಠೋಪನಿಷತ್)

* * *

# ಶ್ರೀ ಪಿಳ್ಳೈ ಲೋಕಾಚಾರ್ಯ

- ರಘುಸುತ.

ಮಹಾವಿಷ್ಣುವಿನಿಂದ ಪ್ರತಿಪಾದಿತವಾದ ಶ್ರೀವೈಷ್ಣವ ತತ್ತ್ವ ಪರಂಪರೆಯು ಭೂಮಿಯ ಮೇಲೆ ವಿಷ್ಣುಭಕ್ತಿಯನ್ನು ಹರಡಲು ಸಹಾಯವಾಯಿತು ಆಳ್ವಾರರು, ತದನಂತರದಲ್ಲಿ ಆಚಾರ್ಯರುಗಳು ಈ ವಿಷ್ಣುತತ್ವವನ್ನು ಜಗತ್ತಿನಾದ್ಯಂತ ಹರಡಿದರು ಈ ಪರಂಪರೆಯಲ್ಲಿ ಕಡೆಯ ಕೊಂಡಿಯಾದ ಶ್ರೀ ರಾಮಾನುಜರು ವಿಶಿಷ್ಟಾದ್ವೈತ ದರ್ಶನದ ಪ್ರತಿಪಾದನೆ ಮಾಡಿ, ಅದಕ್ಕೊಂದು ರೂಪುಕೊಟ್ಟು ಅದಕ್ಕೆ ಆಧಾರ ಗ್ರಂಥಗಳನ್ನು ರಚಿಸಿ, ವಿಶಿಷ್ಟಾದ್ವೈತ ವಿಶ್ವಾಚಾರ್ಯರೆನಿಸಿಕೊಂಡರು

ಮುಂದೆ ಇವರ ಶಿಷ್ಯ ಪರಂಪರೆಯು ಈ ಸಿದ್ಧಾಂತವನ್ನು ಎಲ್ಲ ಕಡೆಯಲ್ಲೂ ಹರಡಿ, ಜನಸಾಮಾನ್ಯರಿಗೂ ಶ್ರೀವೈಷ್ಣವ ದರ್ಶನದ ಪರಿಚಯ ಮಾಡಿಕೊಟ್ಟರು ವಿಷ್ಣುಪಾರಮ್ಯದ ಮಹಿಮೆ ಸಾಮಾನ್ಯನಿಗೂ ಅರಿವಾಗುವಂತೆ ಮಾಡಿದರು. ಅವರ ಆಡು ಭಾಷೆಯಲ್ಲಿ, ಅವರಿಗೆ ಅರ್ಥವಾಗುವ ರೀತಿಯಲ್ಲಿ ಸುಲಭ ತಮಿಳಿನಲ್ಲಿ ವಿಷ್ಣುವಿನ ಹಿರಿಮೆಯನ್ನು ಬರೆದರು, ಪ್ರವಚನಗಳನ್ನು ನೀಡಿದರು, ದೇವಾಲಯಗಳನ್ನು ನಿರ್ಮಿಸಿದರು, ಶಿಥಿಲ ದೇವಾಲಯಗಳ ಜೀರ್ಣೋದ್ಧಾರ ಮಾಡಿದರು. ಹಿಂದೆ ಯಾರೂ ಮಾಡದ ಅಪರೂಪ ಮಾನವ ಸೇವೆಯನ್ನು ಮಾಡಿದರು ದೀನದಲಿತರ, ಧರ್ಮದ, ಸಂಸ್ಕೃತಿಯ, ಪರಂಪರೆಯ ಉದ್ಧಾರಕ್ಕಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟರು, ತಮ್ಮ ಪ್ರಾಣಗಳನ್ನೇ ತ್ಯಾಗಮಾಡಿದರು ಅವರು ತಮ್ಮ ಸಾಂಸಾರಿಕ ಸುಖಭೋಗ ವೈಭವಗಳನ್ನು ತ್ಯಾಗ ಮಾಡಿ, ಭಗವಂತನ ಪ್ರೀತ್ಯರ್ಥವಾಗಿ ಮಾಡಿದ ಸೇವಾ ಕಾರ್ಯಗಳು ಇಂದಿಗೂ ಮೈನವಿರೇಳಿಸುವಂತಹುದು ಧರ್ಮ, ಭಗವಂತ, ನಂಬಿಕೆ, ಭಕ್ತರ ಉದ್ಧಾರಕ್ಕಾಗಿ, ಸರ್ವತೋಮುಖ ಸಮಾಜದ ಹಾಗೂ ನಾಡಿನ ಅಭಿವೃದ್ಧಿಗಾಗಿ ತಮ್ಮ ಜೀವನಗಳನ್ನೇ ತೇಯ್ದರು ಇಂತಹ ಮಹಾನುಭಾವರ ಜೀವನ ಗಾದೆಯಿಂದ ಶ್ರೀ ವೈಷ್ಣವ ಸಂತರ ಪರಂಪರೆಯು ತುಂಬಿಹೋಗಿದೆ

ಈ ಶಿಷ್ಯ ಪರಂಪರೆಯು ಬೇರೆ ಬೇರೆ ಮಾರ್ಗಗಳಲ್ಲಿ ಮುಂದುವರೆದು ತಮ್ಮ ಸೇವಾ ಕಾರ್ಯವನ್ನು ನಡೆಸಿತು ರಾಮಾನುಜರು ಸೂಚಿಸಿದ ಈ ಮಾರ್ಗಗಳಲ್ಲಿ ಒಂದೊಂದನ್ನು ಒಂದೊಂದು ಗುಂಪು ಅನುಸರಿಸಿತು ಹೀಗಾಗಿ ರಹಸ್ಯಾರ್ಥ ಪರಂಪರೆ, ಶ್ರೀಭಾಷ್ಯ ಪರಂಪರೆ, ಭಗವದ್ವಿಷಯ ಪರಂಪರೆಗಳೇ ಅಲ್ಲದೆ ಪ್ರಮುಖ ವ್ಯಕ್ತಿಗಳ ಪರಂಪರೆ ಹಾಗೂ ಶ್ರೀ ಮರಗಳ ಪರಂಪರೆಯಾಗಿ ರಾಮಾನುಜ ಸಿದ್ಧಾಂತದ ಪ್ರಚಾರ ಕಾರ್ಯವನ್ನು ಇವರುಗಳು ಮುಂದುವರೆಸಿದರು ರಾಮಾನುಜರು ಸ್ಥಾಪಿಸಿದ ೭೪ ಮರ ಪೀರಗಳಂತೆ ಈ ಶಿಷ್ಯ ಪರಂಪರೆಯೂ ವಿಸ್ತರಣಾ ಕಾರ್ಯ ಹೆಚ್ಚಿದಂತೆ ಬೇರೆ ಬೇರೆ ಶಿಷ್ಯ ಪೀರಗಳನ್ನು ಸ್ಥಾಪಿಸಿ, ಬೆಳೆಸಿ, ಧಾರ್ಮಿಕ ಸೇವೆಯಲ್ಲಿ ನಿರತರಾದರು ಇದಕ್ಕಾಗಿ ರಾಮಾನುಜರಾದಿಯಾಗಿ ಅವರ ಹಿಂದಿನ ಆಚಾರ್ಯರು, ನಂತರದ ಕೆಲವು ಆಚಾರ್ಯರುಗಳು ಬರೆದ ಸಿದ್ಧಾಂತದ ಗ್ರಂಥಗಳಿಗೆ ವ್ಯಾಖ್ಯಾನ, ವಿವರಣೆಗಳನ್ನು ತಮಿಳು ಭಾಷೆಯಲ್ಲಿ ಬರೆದು, ರಾಮಾನುಜ ಸಿದ್ಧಾಂತವನ್ನು ಜನಸಾಮಾನ್ಯರಿಗೆ ತಲುಪಿಸಿದರು. ಇಂತಹ ಜನಪ್ರಿಯ ಕಾರ್ಯವನ್ನು ಮಾಡಿದವರಲ್ಲಿ ಪಿಳ್ಳೈ ಲೋಕಾಚಾರ್ಯರು ಪ್ರಮುಖರು ಇವರು ಭಗವದ್ವಿಷಯ ಪರಂಪರೆಯಲ್ಲಿ ಪ್ರಮುಖಸ್ಥಾನವನ್ನು ಪಡೆದಿದ್ದಾರೆ. ಇದೇ ರೀತಿಯ ಸ್ಥಾನವನ್ನು ಮಣವಾಳ ಮಾಮುನಿಗಳೂ (ಪೆರಿಯ ಜೀಯರ್‌ರವರೂ) ಹೊಂದಿದ್ದಾರೆ

## ಶ್ರೀಕೃಷ್ಣಪಾದರು (೧೧೬೮-೧೨೬೫)

ಇವರು ಉತ್ತಮ ಕುಟುಂಬಕ್ಕೆ ಸೇರಿದವರು ಇವರು ನಂಪಿಳ್ಳೈರವರ ಶಿಷ್ಯರು. ಇವರಿಗೆ ವಡ



ಕ್ಕುತ್ತಿರುವೀಧಿಪಿಳ್ಳೈ, ಸುಂದರವರಯೋಗಿ ಎಂಬ ಹೆಸರುಗಳಿದ್ದುವು. ಇವರು ನಂಪಿಳ್ಳೈ (ಕಲಿಜಿತ್) ರವರ ಶಿಷ್ಯರು

ನಂಪಿಳ್ಳೈ (೧೨೦೭-೧೩೦೨) ರವರನ್ನು ಮೊದಲನೆ ಲೋಕಾಚಾರ್ಯ ಎಂದು ಕರೆಯ ಲಾಗುತ್ತಿತ್ತು ಇವರ ಕಾಲಕ್ಷೇಪ ಗೋಷ್ಠಿಯು ತುಂಬಾ ಪ್ರಖ್ಯಾತಿ ಪಡೆದು, ಶ್ರೀರಂಗದಲ್ಲಿ 'ನಂಪಿಳ್ಳೈ ಗೋಷ್ಠಿಯೇ, ನಂಪೆರುಮಾಳ್ (ಶ್ರೀರಂಗನಾಥನ) ಗೋಷ್ಠಿಯೇ ಎಂಬ ಖ್ಯಾತಿ ಯನ್ನು ಪಡೆದಿತ್ತು ಅನೇಕರು ಇವರನ್ನು ಆಶ್ರಯಿಸಿ, ಇವರ ಬಳಿ ಭಗವದ್ವಿಷಯಾ ದಿಗಳನ್ನು ಅಧಿಕರಿಸಿ, ಭಗವದ್ರಾಮಾನುಜರ ಆಚಾರ್ಯ ಪರಂಪರೆಯನ್ನು ಚಿರನೂತನವಾ ಗಿಸಿದ್ದರು. ಇವರಲ್ಲಿ ಪ್ರಮುಖರೆಂದರೆ ಕೃಷ್ಣಪಾ ದರು.

ಇವರು ಕಾಂಚೀಪುರದ ಹತ್ತಿರದ ಮುಡುಂಬೈ ಗ್ರಾಮದಲ್ಲಿ ಜನಿಸಿದರು. ಇವರಿಗೆ ಶ್ರೀರಾಮನಲ್ಲಿ ಅಪರಿಮಿತ ಭಕ್ತಿ. ಹನುಮಂತನಂತೆ ಬ್ರಹ್ಮಚಾರಿ ಯಾಗಿರಬೇಕೆಂಬ ಮಹದಾಸೆ ಇತ್ತು ಈ ಜ್ಞಾನ ಇವರಲ್ಲಿ ಹುಟ್ಟುವುದಕ್ಕೆ ಮುಂಚೆಯೇ ಇವರ ತಾಯಿ ಇವರಿಗೆ ಮದುವೆ ಮಾಡಿಬಿಟ್ಟಿದ್ದರು

ಆಚಾರ್ಯನಿಷ್ಠೆ ಇವರಿಗೆ ಮುಖ್ಯವಾಗಿತ್ತು ಅಂತೆಯೇ ಕಾಲಕ್ಷೇಪ ಸಮಯದಲ್ಲಿ ನಂಪಿಳ್ಳೈರ ವರು ತಿರುವಾಯ್ಮೊಳಿಗೆ ಹೇಳಿದ ಸ್ವಾರಸ್ವಾರ್ಥ, ವಿಶೇಷಾರ್ಥಗಳನ್ನು ಸಂಗ್ರಹಿಸಿ, ಅವರ ಅಪ್ಪಣೆ ಯಂತೆ ಇವರು ಬರೆದ 'ಈಡು ಮುಪ್ಪತ್ತಾರಾಯಿ ರಪ್ಪಡಿ' ಎನ್ನುವ ೩೬೦೦೦ ಪದ್ಯಗಳ ವ್ಯಾಖ್ಯಾನ ಗ್ರಂಥವು ಅದ್ಭುತವಾದುದು ಈ ವ್ಯಾಖ್ಯಾನವು ಶ್ರುತಿ ಪ್ರಕಾಶಿಕೆಗೆ ಸಮ ಎನ್ನುವರು ಹಿರಿಯರು ಪ್ರಮಾಣ ಸಂಪ್ರದಾಯಾನುಸಾರ ಇದನ್ನು ಪ್ರವ ಚನ ಮಾಡುವ ರೂಢಿ ಆಗಿನಿಂದ ಈಗಿನವ ರೆಗೂ ನಡೆದು ಬಂದಿದೆ

ಇಂತಹ ಶಿಷ್ಯರ ಮೇಲೆ ಗುರುಗಳಾದ ನಂಪಿ ಳ್ಳೈರವರಿಗೆ ವಿಶೇಷ ಪ್ರೀತಿ ಒಂದು ದಿನ ನಂಪಿ ಳ್ಳೈರವರು ತಮ್ಮ ಈ ಪ್ರೀತಿಯ ಶಿಷ್ಯ ಕೃಷ್ಣಪಾದರ ಮನೆಗೆ ದಯಮಾಡಿಸಿದರು ಆಗಿನ ಕಾಲದಲ್ಲಿ ಶಿಷ್ಯರ ಮನೆಗೆ ಗುರುಗಳು ದಯಮಾಡಿಸುವುದು ತುಂಬಾ ಅಪರೂಪ ಹಾಗೂ ವಿಶೇಷ

ಅಂತೆಯೇ ಗುರುಗಳು ದಯಮಾಡಿಸುವರೆ ನ್ನುವುದನ್ನು ಆಲಿಸಿದ ಸ್ತ್ರೀ ಪುರುಷರೆಲ್ಲರೂ ಅಲ್ಲಿಗೆ ಬಂದು ಗುರುಗಳ ಪಾದಗಳಿಗೆ ಸಾಷ್ಟಾಂಗ ಪ್ರಣಾಮ ಮಾಡಿದರು ಅಂತಹವರಲ್ಲಿ ಓರ್ವ ಹೆಣ್ಣು ಆಗತಾನೆ ಸ್ನಾನಮಾಡಿ, ನೆನೆದ ವಸ್ತ್ರಗ ಳೊಂದಿಗೆಯೇ ಬಂದು ಸಾಷ್ಟಾಂಗ ಪ್ರಣಾಮ ಮಾಡಿದಳು ಗುರುಗಳಿಗೆ ಆಕೆಯನ್ನು ನೋಡಿ ಆಶ್ಚರ್ಯವಾಯಿತು

"ಈಕೆ ಯಾರು ? ಯಾಕೆ ಹೀಗೆ ನೆನೆದ ವಸ್ತ್ರಗ ಳೊಂದಿಗೇ ಬಂದಿರುವಳು?" ಎಂದು ಗುರುಗಳು ಪ್ರಶ್ನಿಸಿದರು

ಆಕೆ ಕೃಷ್ಣಪಾದರ ಪತ್ನಿಯೆಂದೂ, ಸ್ನಾನ ಮಾಡುತ್ತಿದ್ದಾರೆ. ಹಾಗೆಯೇ ಮುಗಿಸಿ ಬಂದ ಳೆಂದೂ ಅಲ್ಲಿದ್ದವರು ತಿಳಿಸಿದರು

"ತಾವು ಬಂದವರು ಹಾಗೆಯೇ ಹಿಂತಿರುಗಿ ಬಿಡುವಿರಿ ತಮ್ಮ ಶ್ರೀಪಾದ ಸೇವೆ ತಪ್ಪಿಹೋಗು ತ್ತದೆಯೆಂದು ಭಾವಿಸಿ ಹಾಗೆಯೇ ಬಂದೆ"

- ಎಂದು ಆಕೆ ನಾಚಿ, ತಲೆತಗ್ಗಿಸಿ, ಮೆಲುದನಿ ಯಲ್ಲಿ ಹೇಳಿದಳು

ತಾವು ಹೆಚ್ಚು ಹೊತ್ತು ನಿಲ್ಲಲಾರೆವೆಂದು ಭಾವಿಸಿ, ಆಕೆ ಬೇರೆ ಒಣಗಿದ ವಸ್ತ್ರಗಳನ್ನು ಧರಿ ಸಿಲು ಸಮಯವಿಲ್ಲವೆಂದುಕೊಂಡು ಹಾಗೆಯೇ ಬಂದಿರಬೇಕೆಂದು ಗುರುಗಳು ಊಹಿಸಿದರು ಆಕೆಯ ಗುರುಭಕ್ತಿಯನ್ನು ಮೆಚ್ಚಿಕೊಂಡರು. ಚಳಿಗೆ, ಗಡಗಡನೆ ನಡುಗುತ್ತಿದ್ದ ಆಕೆಯನ್ನು ಕಂಡು ಕನಿಕರದಿಂದ,

"ಹೋಗು ತಾಯಿ! ಬಟ್ಟೆಬದಲಾಯಿಸು ಬಾ! ನಾನು ಕಾದಿರುತ್ತೇನೆ" ಎಂದು ಹೇಳಿ ಆಕೆಯನ್ನು ಮನೆಯೊಳಗಡೆಗೆ ಕಳುಹಿಸಿ, ತಾವು ಅಲ್ಲಿಯೇ ಇದ್ದ ಪೀಠವೊಂದರ ಮೇಲೆ ಕುಳಿತರು

ಅದೇ ಸಮಯಕ್ಕೆ ಸರಿಯಾಗಿ ಕೃಷ್ಣಪಾದರ ತಾಯಿ ಬಂದು, ಗುರುಗಳಿಗೆ ಪ್ರಣಾಮ ಮಾಡಿ ದಳು ಆಕೆಯ ಕಂಗಳಲ್ಲಿ ಕಣ್ಣೀರು, ಆಕೆಯ ಕಣ್ಣೀ ರನ್ನು ಗಮನಿಸಿ ಚಕಿತರಾದ ಗುರುಗಳು,

"ಏಕೆ ತಾಯಿ ಕಣ್ಣೀರು? ನಿನ್ನ ದುಃಖಕ್ಕೆ ಕಾರ ಣವೇನು ?" ಎಂದು ಕೇಳಿದರು

"ಏನು ಹೇಳಲಿ ಆಚಾರ್ಯ! ನಮ್ಮ ವಂಶಕ್ಕೆ ಇವನು ಒಬ್ಬನೇ ಮಗ. ಇವನಿಗೆ ಮದುವೆ ಯಾಗಿ ವರ್ಷಗಳೇ ಉರುಳಿವೆ ಸಂತಾನ ಭಾಗ್ಯ ವಿನ್ನೂ ಇಲ್ಲ ಮಕ್ಕಳಿಲ್ಲದ ಮನೆ ಮನೆಯೆ? ನೀವು ಇವನಿಗೆ ಆಶೀರ್ವದಿಸಿ, ಅನುಗ್ರಹಿಸಿ" ಎಂದಳಾಕೆ ಗದ್ಗದ ಕಂಠದಿಂದ

ಆಕೆಯ ದುಃಖತಪ್ತ ಮುಖ ನಂಪಿಳ್ಳೈರವರ ಹೃದಯವನ್ನು ಕರಗಿತು ಅದೇ ಸಮಯಕ್ಕೆ ಕೃಷ್ಣ ಪಾದರ ಪತ್ನಿ ಬಂದು, ಪತಿಯ ಪಕ್ಕದಲ್ಲಿ ನಿಂತಳು

ಮತ್ತೆ ಆ ತಾಯಿ ಕೇಳಿದಳು, "ತಮ್ಮ ಸಮಾನ ರಾದ ಕುಮಾರರನ್ನು ಇವರಿಗೆ ಅನುಗ್ರಹಿಸಿ ಗುರು ದೇವ" ಬೇಡಿಕೆಯ ದನಿಯಲ್ಲಿ

ಆಲಿಸಿದ ಗುರುಗಳು ಕರುಣಾಪೂರಿತ ದೃಷ್ಟಿ ಯಿಂದ ಕೃಷ್ಣಪಾದರ ಪತ್ನಿಯನ್ನು ನೋಡಿ, ಆಕೆಯ ಹೊಟ್ಟೆಯ ಕಡೆ ಅರ್ಧ ನಿಮೀಲಿತ ದೃಷ್ಟಿ ಹರಿಯಿಸಿ, ಬಲಗೈ ಎತ್ತಿ, ಅಭಯಪ್ರದಾನ ಮುದ್ರೆ ಯಲ್ಲಿ ಕೈಯನ್ನು ಮುಂದಕ್ಕೆ ಚಾಚಿದರು

ಅಷ್ಟೇ ಅಲ್ಲಿ ಮಿಂಚೊಂದು ಹರಿದಂತಾ ಯಿತು

ಕೃಷ್ಣಪಾದರ ಪತ್ನಿಗೆ ಮೈಯ್ಯೆಲ್ಲೆಲ್ಲ ಬೆಳ ಕೊಂದು ಹರಿದಂತಾಗಿ, ಏನೋನೋ ಹರಿದಾಡಿ ದಂತಾಗಿ, ಮೈನವಿರೆದ್ದಿತು ಬೇರೊಂದು ಲೋಕ ದಲ್ಲಿದ್ದಂತಹ ಅನುಭವ ಆಕೆಗೆ

ನಂಪಿಳ್ಳೈರವರು ಶಿಷ್ಯರನ್ನು ಹತ್ತಿರ ಕರೆದು ಮೈ ತಡವಿ, "ಕಂದಾ! ಮಾತೃದೇವೋ ಭವ! ತಾಯಿಯ ಮನಸ್ಸಿಗೆ ನೋವು ಕೊಡಬೇಡ ಈಕೆ ಯೊಂದಿಗೆ ಒಳಗೆ ಹೋಗು!"

ಎಂದು ಆಶೀರ್ವದಿಸಿದರು.

"ಗುರುಗಳ ಪ್ರಸಾದ!" ಎಂದರವರು

ತಾಯಿಯ ಇಚ್ಛೆ, ಗುರುಗಳ ಆಜ್ಞೆಯಂತೆ ಕೃಷ್ಣಪಾದರು ಹೆಂಡತಿಯೊಂದಿಗೆ ಸಂಸಾರ ಮಾಡಲಾರಂಭಿಸಿದರು ಗುರುಗಳ ಸದ್ಗುಣಗಳು ಅವರ ಕಣ್ಣೆದುರುಗಡೆ ಮಾದರಿಯಾಯಿತು ತಮ್ಮ ಸಂತಾನವು ಗಂಡು ಮಗುವಾದರೆ ಅವ ರಂತಾಗಲಿ ಎಂದು ಆಶಿಸಿದರು. ಅವರ ಆಸೆ ಫಲಿಸುವ ಕಾಲ ಸನ್ನಿಹಿತವಾಯಿತು

## ಪಿಳ್ಳೈ ಲೋಕಾಚಾರ್ಯರ ಜನನ

ಸ್ವಲ್ಪಕಾಲಾನಂತರ ಕೃಷ್ಣಪಾದರ ಭಾರ್ಯೆಯು ಒಂದು ಗಂಡುವಿಗೆ ಜನ್ಮವಿತ್ತಳು ಕೋಯಿಲ್ ಎನ್ನುವ ಸ್ಥಳವದು, ಜನನ ೧೨೦೫, ಕ್ರೋಧನ ಸಂವತ್ಸರ ವಡಮಾಳ್ ಗುಂಪಿಗೆ ಸೇರಿದ ಕೃಷ್ಣ

ಪಾದರು ಶ್ರೀವತ್ಸ ಗೋತ್ರದವರು ಇವರು ಯಜುಶ್ಶಾಖೆಯವರಾಗಿದ್ದು ಆಪಸ್ತಂಭ ಸೂತ್ರದವರು

ತುಲಾಯಾಂ ಶ್ರವಣೇ ಜಾತಂ
ಲೋಕಾರ್ಯ ಮಹಮಾಶ್ರಯೆ
ಶ್ರೀ ಕೃಷ್ಣಪಾದ ತನಯಂ
ತತ್ಪಾದಾಂಬುಜ ಸಂಶ್ರಿತಮ್

ಶ್ರೀಕೃಷ್ಣಪಾದರು ತಮ್ಮ ಸ್ಥಳವಾದ ಮುಡಂಬೈ ಗ್ರಾಮದಲ್ಲಿ ಮಗುವಿಗೆ ಜಾತಕರ್ಮ, ನಾಮಕರಣಗಳನ್ನು ಮಾಡಿದರು ತಮ್ಮ ಗುರುಗಳ 'ನಂಪಿಳ್ಳೈ' ಹೆಸರಿನಲ್ಲಿ 'ಪಿಳ್ಳೈ' ಪದವನ್ನು ಹಾಗೂ ಅವರ ಬಿರುದಾದ 'ಲೋಕಾಚಾರ್ಯ' ಎಂಬುದನ್ನು ಸೇರಿಸಿ, ಅವರು ತಮ್ಮ ಮಗನಿಗೆ 'ಪಿಳ್ಳೈ ಲೋಕಾಚಾರ್ಯ' ಎಂಬ ಹೆಸರನ್ನಿಟ್ಟರು ತಮ್ಮ ಗುರುಗಳ ಮೇಲಿನ ಭಕ್ತಿ ಮತ್ತು ಗೌರವಗಳು ಅವರನ್ನು ಈ ರೀತಿ ಪ್ರೇರೇಪಿಸಿತು ಅಂತೆಯೇ ಇದೇ ಹೆಸರನ್ನೆ ತಮ್ಮ ಮಗನಿಗೆ ಅವರು ನಾಮಕರಣ ಮಾಡಿದರು

ಈ ವಿಚಾರ ನಂತರದಲ್ಲಿ ನಂಪಿಳ್ಳೈರವರಿಗೆ ಗೊತ್ತಾಯಿತು ತಮಗೆ ಗೊತ್ತಿಲ್ಲದೆ ತಮ್ಮ ಹೆಸರನ್ನು ಇಟ್ಟಿದ್ದಕ್ಕೆ ಶಿಷ್ಯನ ಬಳಿ ಅವರು ಆಕ್ಷೇಪಿಸಿದರು

"ನಿನ್ನ ಮಗುವಿಗೆ ದೇವರ ಹೆಸರು 'ರಂಗನಾಥ' ಎಂದಿಡಬೇಕೆಂಬ ಆಸೆ ಇತ್ತು. ಆದರೆ ನನ್ನ ಹೆಸರನ್ನು ಇಟ್ಟೆ, ನನ್ನನ್ನು ಕೇಳದೆಯೆ ಈ ಕೆಲಸ ಮಾಡಬಹುದೆ?" ಎಂದರು

ಕೃಷ್ಣಪಾದರು ತಲೆ ತಗ್ಗಿಸಿದರು ಮುಂಚೆಯೇ ತಮ್ಮ ಗುರುಗಳಿಗೆ ಈ ವಿಷಯ ತಿಳಿಸಿದ್ದರೆ ಅವರು ಒಪ್ಪುತ್ತಿರಲಿಲ್ಲವೆಂಬುದು ಕೃಷ್ಣಪಾದರಿಗೆ ಚೆನ್ನಾಗಿ ಗೊತ್ತಿತ್ತು ಆದರಿಂದ ಗುರುಗಳಿಗೆ ತಿಳಿಸದೆಯೇ ನಾಮಕರಣಾದಿ ಶುಭಕಾರ್ಯಗಳನ್ನೆಲ್ಲ ಮಾಡಿ ಮುಗಿಸಿದ್ದರು.

ಅಂತೆಯೇ ತಮ್ಮ ಗುರುಗಳ ಪಾದಗಳಿಗೆ ಎರಗಿ, "ಸರ್ವಾಪರಾಧಾನ್ ಕ್ಷಮಸ್ವ ಕ್ಷಮಸ್ವ" ಎಂದು ಕಣ್ಣೀರು ಸುರಿಸಿದರು. ಗುರುಗಳು ಶಿಷ್ಯನ ಈ ವರ್ತನೆಗೆ ಕರಗಿಹೋದರು.

"ಆಯ್ತು ಏಳು! ಏಳು! ಇದೇನೋ ಹೀಗಾಯಿತು. ಮುಂದಿನ ಮಗುವಿಗಾದರೂ ನೀನು ಶ್ರೀರಂಗನಾಥನ ಹೆಸರನ್ನಿಡು" ಎಂದು ಆಜ್ಞಾಪಿಸಿದರು.

ಬದುಕಿದೆಯಾ ಬಡಜೀವವೇ ಎಂದುಕೊಂಡರು ಕೃಷ್ಣಪಾದರು ತಮ್ಮ ಗುರುಗಳು ಹೀಗೆಯೇ ವರ್ತಿಸುವರು ಎಂಬುದು ಅವರಿಗೆ ಗೊತ್ತಿತ್ತು ಅವರ ಅಪರಾಧ ಕ್ಷಮಿಸಲ್ಪಟ್ಟಿತ್ತು

"ಈ ಶಿಶುವಿಗೆ ನಿಮ್ಮಂತಹ ಸೌಭಾಗ್ಯ ಲಭಿಸಬೇಕೆಂದು ಅನುಗ್ರಹಿಸಿ!" ಎಂದು ಬೇಡಿದರು

"ತಥಾಸ್ತು" ಎಂದು ಮನಃಪೂರ್ತಿ ಆಶೀರ್ವದಿಸಿದರು

ಹೀಗೆ ನಂಪಿಳ್ಳೈರವರ ಶುಭಕೋರಿಕೆಗಳನ್ನು ಪಡೆದ ಶಿಶು ಬೆಳೆಯತೊಡಗಿತು

ಇದಾದ ಎರಡು ವರ್ಷಗಳ ನಂತರ ಕೃಷ್ಣಪಾದರಿಗೆ ಮತ್ತೊಂದು ಮಗು ಹುಟ್ಟಿತು ಈ ಮಗುವಿನ ನಾಮಕರಣ ಸಂದರ್ಭದಲ್ಲಿ ಸ್ವತಃ ನಂಪಿಳ್ಳೈರವರೇ ದಯಮಾಡಿಸಿ, ಆ ಶಿಶುವಿಗೆ 'ಅಳಗಿಯ ಮಣವಾಳಪ್ಪೆರುಮಾಳ್ ನಾಯನಾರ್' ಎಂಬ ಹೆಸರನ್ನಿಟ್ಟರು ಹೀಗೆಂದರೆ ಶ್ರೀರಂಗನಾಥನ ಹೆಸರಾದ ರಮ್ಯಜಾಮಾತೃ (ಸುಂದರನಾದ ದೇವ) ಎಂಬುದರ ತಮಿಳು ರೂಪ. ಗೋದಾದೇವಿಯ ಪಾಣಿಗ್ರಹಣವಾದ ಮೇಲೆ ಶ್ರೀರಂಗನಾಥನು ವಿಷ್ಣುಚಿತ್ತರ ಅಳಿಯನಾದನು ಸುಂದರ ಅಳಿಯ ಎನ್ನುವುದರ ಸಂಸ್ಕೃತ ರೂಪವೇ 'ರಮ್ಯಜಾಮಾತೃ' ಎಂಬುದು. ಮುಂದೆ ಇವರು ಸೌಮ್ಯರಾಗಿದ್ದುದರಿಂದ ಸೌಮ್ಯಜಾಮಾತೃ ಎಂಬುದಾಗಿಯೂ ಇವರನ್ನು ಕರೆದರು

ಈ ಅಣ್ಣ ತಮ್ಮಂದಿರಿಬ್ಬರೂ ರಾಮ-ಲಕ್ಷ್ಮಣರಂತೆ, ಲವ-ಕುಶರಂತೆ ಜೋಡಿಯಾಗಿ ಬೆಳೆದರು ಇಬ್ಬರೂ ಸುಂದರ ಬಾಲಕರು, ಬುದ್ಧಿವಂತರು, ಸೂಕ್ಷ್ಮಗ್ರಾಹಿಗಳು ಲಕ್ಷ್ಮಣನಿಗೆ ಶ್ರೀರಾಮನಂತೆ ಪಿಳ್ಳೈ ಲೋಕಾಚಾರ್ಯರು ಇದ್ದರು

## ವಿದ್ಯಾಭ್ಯಾಸ

ಪಿಳ್ಳೈ ಲೋಕಾಚಾರ್ಯರ ವಿದ್ಯಾಭ್ಯಾಸ ಪ್ರಾರಂಭ ತಂದೆಯವರ ಬಳಿಯಲ್ಲೆ ಆಯಿತು ಅನೇಕ ವಿದ್ವಾಂಸರು, ಶಾಸ್ತ್ರಜ್ಞರು ಮನೆಗೆ ಬರುತ್ತಿದ್ದುದರಿಂದ ತಂದೆಯವರು, ಅವರ ಗುರುಗಳೊಂದಿಗೆ ನಡೆಯುತ್ತಿದ್ದ ಶಾಸ್ತ್ರಾರ್ಥ ಚರ್ಚೆಗಳು ಪರೋಕ್ಷವಾಗಿ ಬಾಲಕನ ಮೇಲೆ ಪರಿಣಾಮ ಬೀರಿತು ಪರಿಣಾಮವಾಗಿ ವೇದ, ಉಪನಿಷತ್ತು, ಪುರಾಣಗಳ, ನಾಲಾಯಿರ ದಿವ್ಯಪ್ರಬಂಧಗಳ ಸಂಪೂರ್ಣ ಜ್ಞಾನ ಇವರಿಗೆ ಲಭಿಸಿತು ಇದರೊಂದಿಗೆ ಸ್ವತಃ ಕೃಷ್ಣಪಾದರೇ ಮಕ್ಕಳಿಬ್ಬರ ಮೇಲೆ ಆಸಕ್ತಿ ವಹಿಸಿ, ಶ್ರೀವೈಷ್ಣವ ಧರ್ಮದ ಶಿಕ್ಷಣವನ್ನು ನೀಡತೊಡಗಿದರು ಶ್ರದ್ಧಾಭಕ್ತಿಗಳಿಂದ ಲೋಕಾಚಾರ್ಯರು ಜ್ಞಾನದ ಭಂಡಾರದ ವಿವಿಧ ಮಜಲುಗಳನ್ನು ಏರತೊಡಗಿ ಅವುಗಳಲ್ಲಿ ಪ್ರಾವೀಣ್ಯತೆಯನ್ನು ಪಡೆದರು ಸದಾ ಕಾಲದಲ್ಲೂ ಶಾಸ್ತ್ರಾರ್ಥಗಳ ಬಗ್ಗೆಯೇ ಚಿಂತನೆ ಮಾಡುತ್ತಿದ್ದುದರಿಂದ ಬಹಳ ಬೇಗ ವಿಶೇಷ ಪಾಂಡಿತ್ಯವನ್ನು ಪಡೆದರು.

ಇವುಗಳೊಂದಿಗೆ ಲೋಕಾಚಾರ್ಯರು ಮತ್ತವರ ಸಹೋದರರು ತಂದೆಯ ಬಳಿಯಲ್ಲಿ ಕಾವ್ಯ ನಾಟಕಾಲಂಕಾರ ಸಾಹಿತ್ಯಗಳು, ವ್ಯಾಕರಣಾದಿ ಶಾಸ್ತ್ರಗಳು, ಸಂಸ್ಕೃತ ದ್ರಾವಿಡಾಮ್ನಾಯಗಳು, ಶ್ರೀ ಭಾಷ್ಯ ಭಗವದ್ವಿಷಯಗಳನ್ನು ಅಧ್ಯಯನ ಮಾಡಿ, ಅವುಗಳ ಜ್ಞಾನವನ್ನು ಕರಗತ ಮಾಡಿಕೊಂಡರು

ಕಾಲಾನುಕ್ರಮದಲ್ಲಿ ತಂದೆ ಕೃಷ್ಣಪಾದರು ಹಾಗೂ ನಂಪಿಳ್ಳೈರವರು ಪರಮಪದಿಸಿದರು. ತಾವು ಅನಾಥರಾದೆವೆಂದು ಲೋಕಾಚಾರ್ಯರು ಭಾವಿಸಿದರೂ, ಧೈರ್ಯಗೆಡದೆ ಪೆರಿಯ ವಾಚ್ಚಾನ್ ಪಿಳ್ಳೈರವರ ಬಳಿ ತಮ್ಮ ಶಿಕ್ಷಣವನ್ನು ಮುಂದುವರಿಸಿದರು ಇವರು ಶ್ರೀರಂಗದ ಪೀಠಾಧಿಪತಿಯಾಗಿದ್ದರು

ಪೆರಿಯ ವಾಚ್ಚಾನ್ ಪಿಳ್ಳೈ (೧೨೨೮ - ೧೩೨೧) ರವರಿಗೆ ಲೋಕಾಚಾರ್ಯರ ಬಗ್ಗೆ ತುಂಬಾ ಪ್ರೀತಿ, ಅಭಿಮಾನ, ತಮ್ಮ ಗುರುಗಳಾದ ನಂಪಿಳ್ಳೈರವರ ಪ್ರೀತಿಯ ಶಿಷ್ಯನ ಮಗ ಎಂಬ ಭಾವನೆ ಒಂದೆಡೆಯಾದರೆ, ತಮ್ಮ ಗುರುಗಳ ಪ್ರೀತಿಯ ಶಿಷ್ಯನೂ ಆಗಿದ್ದುದು ಈ ಅಭಿಮಾನಕ್ಕೆ ಕಾರಣವಾಗಿತ್ತು ಹೀಗಾಗಿ ತಮ್ಮಲ್ಲಿನ ಪೂರ್ಣ ಜ್ಞಾನವನ್ನು ಈತನಿಗೆ ಧಾರೆಯೆರೆದರು. ಶ್ರೀರಂಗದ ಪೀಠಕ್ಕೆ ತಮ್ಮ ನಂತರ ಲೋಕಾಚಾರ್ಯರೇ ಸೂಕ್ತ ವ್ಯಕ್ತಿ ಎಂದು ತಿಳಿದು, ಅಂತೆಯೇ ಸೂಚಿಸಿದ್ದರು ಕೂಡ ಹೀಗಾಗಿ ಲೋಕಾಚಾರ್ಯರು ತಮ್ಮ ಮಟ್ಟವನ್ನು ಮುಟ್ಟಿದ್ದಾರೆಂಬುದನ್ನು ತಿಳಿದ ಕೂಡಲೇ ಸಿದ್ಧಾಂತದ ಪ್ರಚಾರ ಕಾರ್ಯಗಳು ಪೀಠದ ಮೇಲ್ವಿಚಾರಣೆ ಇತ್ಯಾದಿಗಳ ಜವಾಬ್ದಾರಿಯನ್ನು ಇವರಿಗೇ ವಹಿಸಿದರು

## ಸಿದ್ಧಾಂತದ ಪ್ರಚಾರ

ಲೋಕಾಚಾರ್ಯರಿಗೆ ಜೀವನದಲ್ಲಿ ತಾವು ನಿರ್ವಹಿಸಬೇಕಾದ ಗುರಿಯ ಕಡೆ ಗಮನ ಹರಿಯಿತು ಸಿದ್ಧಾಂತದ ಪ್ರಚಾರ ಕಾರ್ಯವನ್ನು ಕೈಗೊಂಡರು. ಇದಕ್ಕಾಗಿ ಅವರು ತಮ್ಮ ಜೀವನವನ್ನೆ ಮುಡಿಪಾಗಿಡಲು ತೀರ್ಮಾನಿಸಿದರು

ಚಿಕ್ಕಂದಿನ ಒಂದು ಘಟನೆ ಅವರ ನೆನಪಿಗೆ ಬಂದಿತು ಒಮ್ಮೆ ಕೃಷ್ಣಪಾದರನ್ನು ನೋಡಲು ಅವರ ಸ್ನೇಹಿತರೊಬ್ಬರು ಬಂದರು ಅವರ ಮಕ್ಕಳನ್ನು ನೋಡಿ ಸಂತೋಷಪಟ್ಟ ಆ ಸ್ನೇಹಿತರು, "ಅಯ್ಯಾ ಎಷ್ಟೊಂದು ಮುದ್ದಾದ ಮಕ್ಕಳು ಇವು? ಮದುವೆ, ಸಂಸಾರ ಬೇಡವೇ ಬೇಡ ಎಂದಿದ್ದೆ ಸಂಸಾರವನ್ನೆ ಮಾಡದೆ ಇದ್ದಿದ್ದಿರೆ ಇಂತಹ ಅಪೂರ್ವ ಮಕ್ಕಳು ನಮಗೆ ಸಿಗುತ್ತಿದ್ದರೆ "ಮುಂದೆ ಶ್ರೀವೈಷ್ಣವ ಧರ್ಮದ ಅಭಿವೃದ್ಧಿಗೆ ಇವರಿಂದ ಎಂತೆಂತಹ ಸೇವೆಗಳು ಆಗದೇ ಕಾಗಿದೆ ಎಂದಿದೆಯೊ, ಆ ಭಗವಂತನ ಮಹಿಮೆ ಯಾರಿಗೆ ಗೊತ್ತು?" ಎಂದು ಕೇಳಿದರು

"ಅದೇನೋ ನಿಜವೆ ! ಆದರೂ ನನಗೆ ಹನುಮಾನ್, ಭೀಷ್ಮ - ಇಂತಹ ಬ್ರಹ್ಮಚಾರಿಗಳೆಂದರೆ ನನಗೆ ತುಂಬಾ ಇಷ್ಟ. ಅವರಲ್ಲಿ ನನಗೆ ಅಪಾರ ಗೌರವವಿದೆ. ಹಾಗಿದ್ದುಕೊಂಡೇ ಭಗವಂತನ ಸೇವೆ, ಸಮಾಜ ಸೇವೆ ಮಾಡುವುದು ನನಗೆ ತುಂಬಾ ಇಷ್ಟ."

ಈ ಸಂಭಾಷಣೆಯನ್ನು ಲೋಕಾಚಾರ್ಯ, ರಮ್ಯಜಾಮಾತೃರವರಿಬ್ಬರೂ ಆಲಿಸಿದ್ದರು ಅವರ ಮೇಲೆ ಈ ಮಾತುಗಳು ತುಂಬಾ ಪ್ರಭಾವ ಬೀರಿದುವು. ಅಂತೆಯೇ ಇವರಿಬ್ಬರೂ ಮದುವೆಯಾಗದೆ, ಆ ಜನ್ಮಬ್ರಹ್ಮಚಾರಿಗಳಾಗಿಯೇ ಇದ್ದು, ನಿಷ್ಠೆಯಿಂದ ಶ್ರೀವೈಷ್ಣವ ಧರ್ಮದ ಸೇವೆ ಮಾಡಿದರು

ಹೀಗಿರುವಾಗ ಲೋಕಾಚಾರ್ಯರ ಪಾಂಡಿತ್ಯ ವಿದ್ವತ್ ಪ್ರಥೆ, ಪ್ರವಚನಗಳ ವೈಖರಿ - ಎಲ್ಲೆಡೆ ಪ್ರಸಾರವಾಗಿ, ಇವರ ಬಳಿಗೆ ಶಿಷ್ಯರಾಗಿ ಬರುವವರು ಹೆಚ್ಚಾಗತೊಡಗಿದರು ಶ್ರೀರಂಗದ ಕಾವೇರಿಯ ಆಚೆಯ ಕಾಡಿನಲ್ಲಿನ ನರಸಿಂಹಸ್ವಾಮಿಯ ದೇವಾಲಯವನ್ನು ತಮ್ಮ ಶಿಕ್ಷಣ ನೀಡುವ ಕೇಂದ್ರವನ್ನಾಗಿ ಬದಲಾಯಿಸಿಕೊಂಡರು ಹೀಗೆ ಮೊದಲು ಬಂದವರೆ ಮಣಲ್ ಪಾಕತ್ತುನಂಬಿಯವರು ಕಂಚಿಯಲ್ಲಿದ್ದ ಇವರಿಗೆ ಸ್ವಾಮಿ ವರದರಾಜನು ಕನಸಿನಲ್ಲಿ ಕಾಣಿಸಿಕ್ಕೊಂಡು ಶ್ರೀರಂಗಕ್ಕೆ ಹೋಗಿ ತಮ್ಮ ಗುರುಗಳನ್ನು ಹುಡುಕಬೇಕೆಂದು ಆಜ್ಞೆ ಮಾಡಿದನಂತೆ. ಅಂತೆಯೇ ಅವರು ಶ್ರೀರಂಗಕ್ಕೆ ಬಂದು, ಲೋಕಾಚಾರ್ಯರ ಕೀರ್ತಿಯನ್ನು ಕೇಳಿ ಅವರನ್ನು ಸಂಧಿಸಿ, ಅವರ ಶಿಷ್ಯರಾದರು. ಹೀಗೆ ಲೋಕಾಚಾರ್ಯರ ಶಿಷ್ಯವರ್ಗ ಬೆಳೆಯುತ್ತಾ ಹೋಯಿತು.

ರಾಮಾನುಜರು ಪ್ರವಾಸ ಮಾಡಿ, ಧರ್ಮ ಪ್ರಚಾರ ಕಾರ್ಯಗಳನ್ನು ಕೈಗೊಳ್ಳಲು ತೀರ್ಮಾನಿಸಿದರು ಅಂತೆಯೇ ಭಗವದ್ವಿಷಯ, ನಾಲಾಯಿರ ದಿವ್ಯಪ್ರಬಂಧಗಳು, ಶ್ರೀ ವೈಷ್ಣವ ಸಿದ್ಧಾಂತ ತತ್ತ್ವಗಳ ಬಗ್ಗೆ ಉಪನ್ಯಾಸಗಳನ್ನು ನೀಡಲು ಪ್ರವಾಸವನ್ನು ಕೈಕೊಂಡರು ಹೋದೆಡೆಯಲ್ಲೆಲ್ಲ ಇವರ ಉಪನ್ಯಾಸಗಳನ್ನು ಕೇಳಲು ಜನರು ಕಿಕ್ಕಿರಿದು ನೆರೆಯತೊಡಗಿದರು. ಆ ಪ್ರೇಕ್ಷಕರನ್ನು ನೋಡಿಯೇ ಸ್ಫೂರ್ತಿ ಪಡೆಯುತ್ತಿದ್ದ ಲೋಕಾಚಾರ್ಯರು ಹೃದಯತುಂಬಿ ಧರ್ಮ ಪ್ರಚಾರ ಕಾರ್ಯವನ್ನು ಕೈಗೊಂಡರು ವಿವರಿಸಿರುವ, ಪ್ರತಿಪಾದಿಸಿರುವ ತತ್ತ್ವಗಳನ್ನು ಸುಲಭ, ಸರಳ ಶೈಲಿಯಲ್ಲಿ ಬೋಧಿಸತೊಡಗಿದರು ಎಲ್ಲ ವರ್ಗದವರೂ ತಮ್ಮ ಈ ಪವಿತ್ರ ಕಾರ್ಯಕ್ಕೆ ಬರಬೇಕೆಂದು ಹೇಳುತ್ತಿದ್ದರು ಅಬ್ರಾಹ್ಮಣರೂ ಕೂಡ ಇಂತಹ ಪ್ರಚಾರ ಸಭೆಗಳಿಗೆ ಬರಬೇಕೆಂದು ತಿಳಿಸುತ್ತಿದ್ದರು ತುಂಬು ಸಂತೋಷದಿಂದ ಅವರುಗಳು ಇಂತಹ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದರು.

ವಿಷ್ಣುಭಕ್ತರೆಲ್ಲ ಸಮಾನರು. ಮೇಲು ಕೀಳೆಂಬ ಭೇದವಿಲ್ಲ ಒಳ್ಳೆಯ ಕುರಿತಾದ ಎಲ್ಲ ವಿಷಯಗಳನ್ನು, ಎಲ್ಲ ರಹಸ್ಯಾರ್ಥಗಳನ್ನು ಎಲ್ಲರೂ ತಿಳಿಯದೇಕು - ಎಂದು ಲೋಕಾಚಾರ್ಯರು ತಿಳಿಸುತ್ತಿದ್ದರು ಇಂತಹ ಹೃದಯ ವೈಶಾಲ್ಯ - ತಿರುಮಂತ್ರಾರ್ಥವನ್ನು ಎಲ್ಲರೂ ತಿಳಿಯಲಿ ಎಂದು ಗೋಪುರವನ್ನೇರಿ ಎಲ್ಲರಿಗೂ ತಿಳಿಸಿದ ರಾಮಾನುಜರ ಉದಾಹರಣೆ ಲೋಕಾಚಾರ್ಯರಿಗೆ ಮಾದರಿಯಾಗಿದ್ದಿತು ಆದರೆ ಮಡಿಮಂತರು ಕೆಲವರಿಗೆ ಇದು ಇಷ್ಟವಾಗದೆ ರಹಸ್ಯಾರ್ಥಗಳನ್ನು ಬಹಿರಂಗ ಗೊಳಿಸುವುದು ತರವಲ್ಲ; ಶಾಸ್ತ್ರವಿರುದ್ಧವಾದುದು ಎಂದು ವಾದಿಸಿ, ಶ್ರೀರಂಗನಾಥನಲ್ಲಿ ದೂರಿದರು

ಇದನ್ನು ಆಲಿಸಿ ರಂಗನಾಥರಿಗೆ ಕೋಪ ಬಂತಂತೆ ಅರ್ಚಕ ಮುಖೇನ ಲೋಕಾಚಾರ್ಯರನ್ನು ಬರಹೇಳಿದರು ಈ ಕರೆ ಬಂದಾಗ ಲೋಕಾಚಾರ್ಯರು ಸ್ನಾನಕ್ಕೆ ಹೊರಗೆ ಹೋಗಿದ್ದರು ತಮ್ಮನವರಾದ ಅಳಗಿಯ ಮಣವಾಳಪ್ಪೆರುಮಾಳ್ ನಾಯನಾರ್‌ರವರು ಅಣ್ಣನಿಗೆ ಬದಲಾಗಿ ತಾವೇ ಹೋದರು.

ಆಗ ದೇವರು ಅರ್ಚಕ ಮುಖೇನ, "ನಾಯನಾರ್ರೇ! ನಾವು ಅನೇಕ ಅವತಾರಗಳನ್ನು ಎತ್ತಿ ಧರ್ಮ ಸಂಸ್ಥಾಪನೆ ಮಾಡಿದುದು ಸರಿತಾನೆ? ಹೀಗಿರುವಾಗ ಲೋಕಾಚಾರ್ಯರು ರಹಸ್ಯಾರ್ಥಗಳನ್ನು ಬಹಿರಂಗಪಡಿಸಿ, ಲೋಕವನ್ನೂ ಧರ್ಮವನ್ನೂ ಕೆಡಿಸಿದ್ದಾರಂತೆ ಹೀಗೆ ಅವರು ಮಾಡಬಹುದೆ? ರಹಸ್ಯಗ್ರಂಥಗಳನ್ನು ವ್ಯರ್ಥಪಡಿಸುವುದು ಸರಿಯೆ?" ಎಂದು ಕೇಳಿದರು

ಆಗ ರಮ್ಯಜಾಮಾತೃರವರು ಲೋಕಾಚಾರ್ಯರ ಗ್ರಂಥಗಳನ್ನು ಅವರ ಉಪನ್ಯಾಸಗಳ ಮೂಲ ಗುರಿಯನ್ನು ವಿವರವಾಗಿ ತಿಳಿಸುವ ಒಂದು ಉಪನ್ಯಾಸವನ್ನು ನೀಡಿದರು. ಇದರೊಂದಿಗೆ 'ಆಚಾರ್ಯ ಹೃದಯ'ವೆಂಬ ತಮ್ಮ ಗ್ರಂಥದ ಸಾರವನ್ನೂ ನಿವೇದಿಸಿಕೊಂಡರು ಇದರಿಂದ ಲೋಕೋಜ್ಜೀವಿತ ಕಾರ್ಯ, ಭಕ್ತರ ಉದ್ಧಾರ ಹೇಗಾಗುವುದು ಎಂಬುದನ್ನು ವಿವರಿಸಿದರು.

ಇದನ್ನು ಆಲಿಸಿದ ರಂಗನಾಥರು ಅರ್ಚಕ ಮುಖೇನ, "ಇದು ಗೀತೆಯಲ್ಲಿ ನಾವು ಹೇಳಿದ ಅರ್ಥಗಳೇ ಇವೆಲ್ಲ. ಹೊಸದೇನೂ ಇಲ್ಲ. ಲೋಕಾಚಾರ್ಯರ ಗ್ರಂಥಗಳ ವಿಷಯ ಸರಳ ಸುಂದರವಾಗಿದೆ. ಅವರು ಜಗದ್ಗುರುಗಳೇ ಸರಿ! ನಮ್ಮಾಳ್ವಾರ್‌ರವರ ದಿವ್ಯಪ್ರಬಂಧಗಳ ಸಾರವೂ ನಿಮ್ಮ ಉಪನ್ಯಾಸದಲ್ಲಿದೆ. ಇದಕ್ಕೆ ಆಚಾರ್ಯ ಹೃದಯ ಎಂಬ ಹೆಸರು ಅನ್ವರ್ಥನಾಮ" ಎಂದು ಅಪ್ಪಣೆ ಕೊಡಿಸಿ, ದೋಷಾರೋಪಣೆ ಮಾಡಿದವರನ್ನು ಕೋಪದಿಂದ ಹೊರಗಟ್ಟಿಬಿಟ್ಟರು.

ಲೋಕಾಚಾರ್ಯರ ಪ್ರವಚನಗಳು, ಉಪದೇಶಗಳು ತುಂಬಾ ಬೋಧಪ್ರದವಾಗಿರುತ್ತಿದ್ದವು. ಶಾಸ್ತ್ರದ ಅರ್ಥ ಮತ್ತು ಅದರ ತತ್ತ್ವಗಳನ್ನು ಬಹಳ ಸುಂದರವಾದ ಹೋಲಿಕೆ ಮತ್ತು ಉದಾಹರಣೆಗಳೊಂದಿಗೆ ಕೇಳುಗರ ಮನಸ್ಸಿಗೆ ನಾಟುವಂತೆ ತಿಳಿಸುತ್ತಿದ್ದರು. ಇತಿಹಾಸದ ಘಟನೆಗಳನ್ನೂ ಉದಾಹರಿಸುವರು. ಈ ಉಪದೇಶಗಳು ತುಂಬಾ ಆಕರ್ಷಕವಾಗಿದ್ದುದರಿಂದ ಅವು ಗ್ರಂಥರೂಪದಲ್ಲಿ ಬೆಳಕು ಕಾಣಲಿ ಎಂಬುದು ಶಿಷ್ಯರ ಆಸೆ. ಆದುದರಿಂದ ಅವನ್ನೆಲ್ಲ ಬರೆದಿಡಬೇಕೆಂದು ಶಿಷ್ಯರು ತಮ್ಮ ಗುರುಗಳನ್ನು ಪ್ರಾರ್ಥಿಸಿದರು. ಆಚಾರ್ಯರೂ ಈ ಕೋರಿಕೆಯನ್ನು ಒಪ್ಪಿ, ಅದರಂತೆ ಗ್ರಂಥರೂಪದಲ್ಲಿ ತಾವು ಹೇಳಿದ ವಿಷಯಗಳನ್ನು

ಬರೆದಿಟ್ಟರು. ಇವೇ 'ಶ್ರೀ ವಚನ ಭೂಷಣ' ಇತ್ಯಾದಿ ಅಷ್ಟಾದಶ ರಹಸ್ಯಗಳು. ಇವುಗಳೊಂದಿಗೆ ಆಚಾರ್ಯರು ಕೆಲವು ಸ್ತೋತ್ರಗಳನ್ನೂ ರಚಿಸಿದರು ಇವು ಸರಳವೂ, ಸುಂದರವೂ ಆಗಿದ್ದು ಮಕ್ಕಳಾದಿಯಾಗಿ ಎಲ್ಲರ ನಾಲಿಗೆಯ ಮೇಲೂ ನಲಿಯಿತು, ನಲಿಯುತ್ತಿವೆ.

## ಹೊಸ ವಿಪತ್ತು

ಲೋಕಾಚಾರ್ಯರು ಧರ್ಮಪ್ರಚಾರ ಕಾರ್ಯವನ್ನು ಹಗಲಿರುಳೆನ್ನದೆ ನಡೆಸಿದರು ಹಾಗೆ ಮಾಡುವಾಗ ತಮ್ಮ ಆರೋಗ್ಯದ ಕಡೆಗೂ ಗಮನ ಹರಿಸಲಿಲ್ಲ ಆಗಾಗ್ಗೆ ಏರುಪೇರಾಗುತ್ತಿತ್ತು ಆದರೂ ಅವರು ಲಕ್ಷಿಸಲಿಲ್ಲ ಲೋಕವನ್ನು ಅರಿಯುವುದರಲ್ಲಿ ಅವರು ನಿರತರಾಗಿದ್ದರು ದೇವರು, ಧರ್ಮ ಪ್ರಚಾರವೆಂದಷ್ಟೆ ಮಡಿ ಪಂಡಿತರ ಹಾಗೆ ಇವರು ಮೂಗು ಹಿಡಿದು ಕೂರಲಿಲ್ಲ ಅಂದು ಪ್ರಚಲಿತವಾಗಿದ್ದ ಸಾಮಾಜಿಕ ಸಮಸ್ಯೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರು ಸ್ವಧರ್ಮ, ಹಿಂದೂ ಧರ್ಮದ ಮೇಲೆ ಹೊಸ ವಿಪತ್ತು ಎರಗಿ ಬರುವುದನ್ನು ಅವರು ಗುರ್ತಿಸಿದರು ಅದೇ ಪರಕೀಯರ ಅದರಲ್ಲೂ ಮುಸ್ಲಿಂ ಧಾಳಿ

ಆಚಾರ್ಯರು ಮಧ್ಯವಯಸ್ಸನ್ನು ದಾಟುವಷ್ಟು ಹೊತ್ತಿಗೆ ಪರಕೀಯರ್ಧ ಧಾಳಿಗಳ ಬಗ್ಗೆ ಗುಮಾನಿ ಬಂದಿತ್ತು ಉತ್ತರ ಭಾರತದಲ್ಲಿ ನೆಲೆಸಿದ್ದ ಮುಸ್ಲಿಂರ ಆಡಳಿತ, ದಕ್ಷಿಣಕ್ಕೂ ಹರಡುವ ಲಕ್ಷಣಗಳನ್ನು ಗಮನಿಸಿದ್ದರು ಅಲ್ಲಾವುದ್ದೀನ್ ಖಿಲ್ಜಿಯ ಮುಖಾಂತರ ದೇವಗಿರಿಯ ಯಾದವರು ಸರ್ವನಾಶವಾದುದನ್ನು ತಿಳಿದು ತುಂಬಾ ದುಃಖಪಟ್ಟರು ಕೃಷ್ಣನ ವಂಶದವರಿಗೆ ಈ ಗತಿ ಬಂತೆ ಎಂದು ಹಲುಬಿದರು ಬೇರೆ ಬೇರೆ ಮುಸ್ಲಿಂಧಾಳಿಕಾರರ ಆಕ್ರಮಣಗಳ ಮುಖಾಂತರ ದೇವಗಿರಿಯವರು ಅವರ ಸಾಮಂತರಾಗಿ, ಅವರ ಗುಲಾಮಗಿರಿಯನ್ನು ಒಪ್ಪಿಕೊಂಡಂತಾಯಿತಲ್ಲ ಎಂದು ನೊಂದರು ಮತ್ತೂ ಒಂದು ಪಿಡುಗಿನ ವಾರ್ತೆ ಹಿಂದೂ ರಾಜರುಗಳ ಮೇಲೆ ಧಾಳಿ ಮಾಡಲು ಬರುವ ಮುಸ್ಲಿಂ ಆಕ್ರಮಣಕಾರರಿಗೆ ಹಿಂದೂ ರಾಜರೇ ಸ್ವತಃ ಸೈನ್ಯ ಮತ್ತಿತರ ಸಹಾಯಗಳನ್ನು ಮಾಡುತ್ತಿರುವುದನ್ನು ಕೇಳಿ, ಮುಂದೆ ಹಿಂದೂ ಧರ್ಮ ಮತ್ತು ಸಂಸ್ಕೃತಿಗಳು ಉಳಿಯಬಲ್ಲವೆ ಎಂದು ಚಿಂತಿಸುತ್ತಿದ್ದರು. ಮುಸ್ಲಿಂರ ಧಾಳಿಗೆ ತುತ್ತಾಗಿ, ಓರಂಗಲ್‌ನ ಮತ್ತಿತರ ರಾಜರು ಮುಸ್ಲಿಂರ ಆಳ್ವಿಕೆಗೆ ತಲೆ ಬಾಗಿದ್ದರು ಇನ್ನು ದ್ವಾರಸಮುದ್ರದ ಹೊಯ್ಸಳರು, ಅದಾದ ನಂತರ ತಮಿಳು ನಾಡು ಅಂದರೆ ಯಮದೂತರು ತಮ್ಮ ಮನೆಯ ಬಾಗಿಲಿಗೇ ಬರುವರು ಎಂದಾಯಿತು.

ಹೀಗಾಗಿ ಧರ್ಮಪ್ರಚಾರದೊಂದಿಗೆ ಹಿಂದೂ ಧರ್ಮ ಮತ್ತು ಸಂಸ್ಕೃತಿಗಳ ರಕ್ಷಣೆಯೂ ದುಡಿಯಬೇಕು, ಅದಕ್ಕಾಗಿ ಜನರನ್ನು ಒಗ್ಗೂಡಿಸಿ ಪ್ರಚೋದಿಸಬೇಕು ಎಂದುಕೊಂಡರು ದೇವಗಿರಿ ಹಾಗೂ ಒರಿಸ್ಸಾ ರಾಜ್ಯಗಳಲ್ಲಿನ ದೇವಾಲಯಗಳ ನಾಶ ಅವರನ್ನು ನಡುಗಿಸಿತು ಆ ಆಕ್ರಮಣಗಳು ತಮ್ಮ ಕಡೆಗೆ ಬಂದರೆ, ಶ್ರೀರಂಗನಾಥ, ಶ್ರೀರಂಗದ ದೇವಾಲಯದ ಗತಿಯೇನು ಎಂದು ತಮ್ಮನ್ನು ತಾವು ಪ್ರಶ್ನಿಸಿಕೊಂಡರು ಹೀಗಾಗಿ ವಿಷ್ಣು ಧರ್ಮದ ಪ್ರಚಾರದೊಂದಿಗೆ ಹಿಂದೂ ಧರ್ಮದ ರಕ್ಷಣೆಯ ಬಗ್ಗೆಯೂ, ವಿಗ್ರಹಗಳ ಸಂರಕ್ಷಣೆಯ ಬಗ್ಗೆಯೂ ವಿಚಾರ ಮಾಡತೊಡಗಿದರು. ತಮ್ಮ ಶಿಷ್ಯರು, ಅಭಿಮಾನಿಗಳೊಂದಿಗೆ ಈ ಸಮಸ್ಯೆಯ ಬಗೆಗೆ ಚರ್ಚಿಸುತ್ತಲೂ ಇದ್ದರು. ಆದರೆ ಈ ಹೊಸ ವಿಪತ್ತಿನ ಬಗ್ಗೆ ಜನರಲ್ಲಿ ಯಾವುದೇ ಪರಿಕಲ್ಪನೆ ಇಲ್ಲದಿರುವುದನ್ನು ಗಮನಿಸಿ, ಮುಂದೆ ತಮ್ಮ ದೇವಾಲಯಗಳ ಭವಿಷ್ಯವೇನು ಎಂದು ಪರಿತಪಿಸಿದರು

ಈ ಭಾವನೆಗಳನ್ನು ತಮ್ಮ ತಮ್ಮಲ್ಲಿ ಹಂಚಿಕೊಳ್ಳುತ್ತಿದ್ದರು. ತತ್‌ಕ್ಷಣದ ದಾರಿಯಾವುದೂ ಹೊಳೆಯದಿದ್ದರೂ ಪ್ರಯತ್ನಗಳು ಮಾತ್ರ ಮುಂದುವರಿದೇ ಇತ್ತು

ಧರ್ಮ ಪ್ರಚಾರಕ್ಕಾಗಿ ಬಹಳಷ್ಟು ಓಡಾಡಿದ್ದುದರಿಂದ ತಮ್ಮನ ಆರೋಗ್ಯವು ಕ್ಷೀಣಿಸಿತು. ತಮ್ಮೊಂದಿಗೆ ರಕ್ತ ಹಂಚಿಕೊಂಡ ತಮ್ಮನ ಆರೋಗ್ಯ ಕುಸಿದು, ಅವರು ವೈಕುಂಠವಾಸಿಗಳಾದುದು ಆಚಾರ್ಯರಿಗೆ ಬಲವಾದ ಪೆಟ್ಟು ನೀಡಿತು. ಧರ್ಮಪ್ರಚಾರ ಕಾರ್ಯ ಕುಂಠಿತವಾಗುತ್ತದೆಯಲ್ಲ ಎಂದು ಬಹಳವಾಗಿ ದುಃಖಿಸಿದರು ಸಮಾಜವನ್ನು ಅರ್ಥಮಾಡಿಕೊಳ್ಳುವ, ಧಾರ್ಮಿಕವಾಗಿ ಜನತೆಯನ್ನು ಶಕ್ತಿಯುತವನ್ನಾಗಿ ಮಾಡಲು, ದೊಡ್ಡ ಪಂಡಿತರಿಗೂ ಮಂತ್ರ ರಹಸ್ಯಗಳನ್ನು ವಿವರಿಸುವ ಶಕ್ತಿ ಇದ್ದ ತಮ್ಮ ರಮ್ಯಜಾಮಾತೃರವರ ಸಮಾನರಾದವರು ಇನ್ಯಾರಿದ್ದಾರೆ - ಎಂದು ಯೋಚಿಸಿದರು ಅವರಿಗೆ ತಕ್ಷಣ ಹೊಳೆದದ್ದು ತಮ್ಮ ಸೋದರ ಮಾವನ ಮಗನಾದ ವೇಂಕಟನಾಥಾಚಾರ್ಯರು ಅವರೇ ಇದಕ್ಕೆ ಸೂಕ್ತ ವ್ಯಕ್ತಿ ತಮ್ಮ ತಮ್ಮನ ಸ್ಥಾನವನ್ನು ತುಂಬಬಲ್ಲವರು ಎಂದುಕೊಂಡರು ಆಚಾರ್ಯರಿಗೆ ಮೊದಲಿನಿಂದಲೂ ಅವರ ಬಗ್ಗೆ ಅತೀವ ಪ್ರೀತಿ ವಾತ್ಸಲ್ಯಗಳು ಇದ್ದುವು. ಹಿಂದೂ ಧರ್ಮ ಹಾಗೂ ಸಂಸ್ಕೃತಿಗಳ ರಕ್ಷಣೆಗಾಗಿ ಅವರೇ ಸರಿಯಾದ ವ್ಯಕ್ತಿ ಎಂದು ತೀರ್ಮಾನಿಸಿ, ಅವರನ್ನು ಕಂಚಿಯಿಂದ ಶ್ರೀರಂಗಕ್ಕೆ ಕರೆಯಿಸಿ, ರಂಗನಾಥನ ಆಸ್ಥಾನದಲ್ಲಿ ಇತರೇ ಹಿರಿಯರ ಅನುಮತಿಯಂತೆ ಅವರ ಉಪನ್ಯಾಸಗಳನ್ನು ಏರ್ಪಡಿಸಿದರು ಮುಂದೆ ಅವರು ಶ್ರೀ ವೈಷ್ಣವ ಸಂಪ್ರದಾಯದ ಮಾರ್ಗದರ್ಶಕರಾಗಲು ಎಲ್ಲ ರೀತಿಯ ಶಿಕ್ಷಣವನ್ನೂ ನೀಡಿದರು

ಅದೊಂದು ದಿನ ಆಚಾರ್ಯರು ವೇಂಕಟನಾಥರೊಂದಿಗೆ ಮಾತುಕತೆಯಾಡುತ್ತಾ,

"ವೇಂಕಟನಾಥಾ! ಇದುವರೆವಿಗೂ ನಿನಗೆ ನಮ್ಮ ದೇಶದ ಪರಿಸ್ಥಿತಿಯನ್ನೆಲ್ಲ ವಿವರಿಸಿದ್ದೇನೆ. ಧರ್ಮ ರಕ್ಷಣೆಗಾಗಿ ನೀನೂ ಶ್ರಮಿಸಬೇಕು ನಿನಗೆ ಶೃಂಗೇರಿಯ ವಿದ್ಯಾರಣ್ಯರು ಸಹಪಾಠಿ ಅಲ್ಲವೆ? ಅವರಿಂದ ಧರ್ಮರಕ್ಷಣೆಗೆ ಹೆಚ್ಚು ಸಹಾಯವನ್ನು ನಿರೀಕ್ಷಿಸಬಹುದು, ಅಲ್ಲವೆ?"

"ಹೌದು ಭಾವ! ನನಗೂ ಅದೇ ಆಸೆ!"

"ನಾವಿರುವ ಸ್ಥಳ ತುಂಬಾ ಅಪಾಯದ ಸ್ಥಳ. ಮುಸ್ಲಿಂರು ಕರ್ನಾಟಕವನ್ನು ದಾಟಿದರೆ ಸಿಗುವುದೇ ಸಂಪದ್ಭರಿತವಾದ ನಮ್ಮ ತಮಿಳುನಾಡು ಮಧುರೆ, ರಾಮೇಶ್ವರದ ದೇವಾಲಯಗಳಲ್ಲಿ ಅಪಾರ ಐಶ್ವರ್ಯವಿದೆ ಎಂದು ಮುಸ್ಲಿಂ ಧಾಳಿಕಾರರಿಗೆ ಸುದ್ದಿ ಹೋಗಿದೆಯಂತೆ ಅವರು ಮಧುರೆಗೆ ಹೋಗಬೇಕಾದರೆ ದಾರಿ ನಮ್ಮ ಶ್ರೀರಂಗವನ್ನೆ ಹಾದು ಹೋಗಬೇಕು ಅದರಿಂದ ನಮಗೆ ಅಪಾಯ ಬಹಳವಿದೆ"

"ಹೌದಲ್ಲ! ದಾರಿಯಲ್ಲಿನ ಕ್ಷೇತ್ರವಿದು ತಾವು ಹೇಳಿದಂತೆ ಅಪಾಯವಿದೆ ಹಗಲಿರುಳೂ ಇದರ ಬಗ್ಗೆ ಚಿಂತಿಸಿ, ಚಿಂತಿಸಿಯೇ ತಮ್ಮ ಆರೋಗ್ಯ ಕೆಡುತ್ತಿದೆ"

"ಇರಬಹುದು ವೇಂಕಟ! ದೇವರಿಗೆ ಏನೇನು ಇಷ್ಟವೊ ಯಾರಿಗೆ ಗೊತ್ತು"

ಅಷ್ಟರಲ್ಲಿ ಶಿಷ್ಯ ಕಸ್ತೂರಿ ರಂಗ ಓಡೋಡಿ ಬಂದು ಗುರುಗಳಿಗೆ ಸುದ್ದಿ ಮುಟ್ಟಿಸಿದ ಮುಸ್ಲಿಂ ಧಾಳಿಕಾರರು ಹೊಯ್ಸಳ ನಾಡಿನ ದ್ವಾರ ಸಮು

ದ್ರದ ಮೇಲೆ ಧಾಳಿ ಮಾಡಿದ್ದಾರೆ. ಅವರ ಮುಂದಿನ ಗುರಿ ಐಶ್ವರ್ಯ ಭರಿತವಾದ ಶ್ರೀರಂಗ, ಮಧುರೆ, ರಾಮೇಶ್ವರಗಳ ಮೇಲಿದೆಯಂತೆ

"ನಾನು ಊಹಿಸಿದಂತೆಯೆ ಆಗುತ್ತಿದೆ ವೇಂಕಟನಾಥ, ಅವರು ಬಂದರೆ ಅವರನ್ನೆದುರಿಸುವಷ್ಟು ಶಕ್ತಿ ನಮ್ಮಲ್ಲಿಲ್ಲ ದೈವವು ಏನು ಮಾಡುತ್ತದೆಯೊ ಗೊತ್ತಿಲ್ಲ - ನೀನಂತೂ ಶೀಘ್ರವಾಗಿ ಕಂಪಿಲ ದೊರೆಯನ್ನು ಅವರ ಮಂತ್ರಿಗಳನ್ನು ಭೇಟಿಯಾಗಿ ಈ ದೇವಾಲಯವನ್ನು ರಕ್ಷಿಸಲು ಪ್ರಯತ್ನಿಸದೇಕೆಂದು ತಿಳಿಸು ಇಲ್ಲಿನ ಆಪತ್ತನ್ನು ತಿಳಿಸಿದ ಮೇಲೆ, ನೇರವಾಗಿ ಇಲ್ಲಿಗೇ ಬಂದುಬಿಡು ರಂಗನಾಥರ ದೇವಾಲಯ, ಉತ್ಸವ ಮೂರ್ತಿಗಳನ್ನು ರಕ್ಷಿಸಬೇಕು, ಪೂರ್ವಾಚಾರ್ಯರ ಗ್ರಂಥ ಭಂಡಾರವನ್ನು ಜೋಪಾನ ಮಾಡಬೇಕು, ಎಲ್ಲಕ್ಕಿಂತ ಹೆಚ್ಚಾಗಿ ಸುದರ್ಶನ ಸೂರಿಗಳ ಶ್ರುತಪ್ರಕಾಶಿಕೆಯನ್ನು ರಕ್ಷಿಸಬೇಕು. ಇವೆಲ್ಲ ನಮ್ಮ ಕರ್ತವ್ಯವಾಗಿದೆ."

"ಆಯ್ತು ಭಾವ! ನಾ ಹೊರಡುವೆ" - ಎಂದು ವೇಂಕಟನಾಥರು ಶ್ರೀರಂಗದಿಂದ ಹೊರಹೊರಟರು ಅವರಿಗೂ ಮುಂಬರುವ ಪರಿಸ್ಥಿತಿಯ ಭೀಕರತೆಯ ಅರಿವಾಗಿತ್ತು.

ಕೆಲವೇ ದಿನಗಳಲ್ಲಿ ದ್ವಾರಸಮುದ್ರದ ಪತನದ ಸುದ್ದಿಯು ಬಂದಿತು. ಲೋಕಾಚಾರ್ಯರ ಊಹೆ ನಿಜವಾಯಿತು ಶ್ರೀರಂಗದ ಸುತ್ತಮುತ್ತಲ ಪ್ರದೇಶಗಳು ಪಾಂಡ್ಯರಾಜರಿಗೆ ಸೇರಿದ್ದರೂ, ಅವರು ಅಂತಃಕಲಹಗಳಲ್ಲಿ ಮುಳುಗಿದ್ದುದರಿಂದ ದೇವಾಲಯಗಳ ರಕ್ಷಣೆಯಲ್ಲಿ ಆಸಕ್ತಿ ಹೊಂದಿರಲಿಲ್ಲ ಹೀಗಾಗಿ ಪರಧರ್ಮೀಯರ ಧಾಳಿಯಾದಾಗ, ಅವರು ಮೊದಲು ಪೆಟ್ಟು ನೀಡುತ್ತಿದ್ದುದು ದೇವಾಲಯಗಳಿಗೇನೆ! ನಂತರ ಸ್ತ್ರೀಯರ ಮಾನಾಪಹರಣ, ರಾಜಭಂಡಾರದ ಲೂಟಿ.

ಸ್ಥಳೀಯ ಆಡಳಿತಾಧಿಕಾರಿಯಿಂದ ಯಾವುದೇ ಪ್ರತಿಕ್ರಿಯೆ ಲಭಿಸಲಿಲ್ಲ ಪ್ರಜೆಗಳಿಗೂ ವಿಧರ್ಮೀಯರ ಧಾಳಿಯ ನಿಖರ ಪರಿಣಾಮ ತಿಳಿದಿರಲಿಲ್ಲ. ಹಿಂದೂ ರಾಜ, ರಾಜರ ಯುದ್ಧದಂತೆ ಸಂಪ್ರದಾಯಬದ್ಧವಾಗಿರುತ್ತದೆ ಎಂದವರು ಅಂದುಕೊಂಡಿದ್ದರು. ಆದರೆ ಲೋಕಾಚಾರ್ಯರು ತಮ್ಮ ಸಂಚಾರದ ಸಮಯದಲ್ಲಿ ಧಾಳಿಕಾರರ ಘೋರ ನಡವಳಿಕೆಗಳನ್ನು ಆಲಿಸಿದ್ದುದರಿಂದ, ಅದೇಪರಿಣಾಮ ತಮ್ಮ ದೇವಾಲಯದ ಮೇಲೂ ಆಗುತ್ತದೆಯೆಂದೂ ತೀರ್ಮಾನಿಸಿದ್ದರು

ಇಷ್ಟರಲ್ಲಿ ದ್ವಾರಸಮುದ್ರದ ಪತನವಾಗಿ ಮಲ್ಲಿಕ್ ಕಾಫಿರನ ಸೈನ್ಯ ಪಾಂಡ್ಯರಾಜ್ಯದ ಮೇಲೆ ಬರುತ್ತಿರುವ ಸುದ್ದಿಯೂ ಬಂದಿತು ಜನರಲ್ಲಿ ಜಾಗೃತಿ ಮೂಡಿಸುವುದು ಕಷ್ಟವೆಂದರಿತ ಆಚಾರ್ಯರು, ಶ್ರೀರಂಗದಲ್ಲಿದ್ದ ಸಾತ್ವಿಕರನ್ನೆಲ್ಲ ಊರು ಬಿಟ್ಟುಹೋಗುವಂತೆ ತಿಳಿಸಿ, ರಂಗನಾಥನ ಗರ್ಭಗುಡಿಯ ದ್ವಾರವನ್ನು ಪೂರ್ತಿ ಮುಚ್ಚಿಸಿ, ಮಹಾದ್ವಾರವನ್ನು ಮುಚ್ಚಿಸಿ, ಅಲ್ಲಿ ಒಂದು ದೊಡ್ಡ ಚಪ್ಪಡಿಯನ್ನು ನಿಲ್ಲಿಸಿ, ಮುಂದೆ ಪುಟ್ಟ ಕಟ್ಟಡ ಹಾಕಿಸಿ, ಅಲ್ಲಿ ಕೃತಕ ರಂಗನಾಥರ ಶಯನ ಮೂರ್ತಿಯನ್ನು ಪ್ರತಿಷ್ಠಿಸಿದರು ಹೊಯ್ಸಳ ರಾಜ್ಯದಿಂದ ಸೈನ್ಯಗಳು ಹೊರಟು ಹೋಗಿವೆ ಎಂಬುದನ್ನು ತಿಳಿದುಕೊಂಡ ಆಚಾರ್ಯರು ಕಾವೇರಿನದಿಯ ದಡದ ಮುಖಾಂತರ ಹೊರಡಲು ನಿಶ್ಚಯಿಸಿದರು ರಂಗನಾಥನ ಉತ್ಸವಮೂರ್ತಿ, ದೇವಸ್ಥಾನದ ನಗನಾಣ್ಯಗಳ ಸಮೇತ, ಶಿಷ್ಯರೊಂದಿಗೆ ದಕ್ಷಿಣ ಮೈಸೂರು ರಾಜ್ಯದ ಕಡೆಗೆ ಹೊರಟರು ವೇಂಕಟನಾಥರಿಗೆ ಬೇಗ ಶ್ರೀರಂಗಕ್ಕೆ ಬಂದು ಉಳಿದ ಕೆಲಸಗಳನ್ನು ನಿರ್ವಹಿಸುವಂತೆ ಸಂದೇಶ ಕಳುಹಿಸಿದರು.

ಶ್ರೀರಂಗದಿಂದ ಹೊರಟ ಲೋಕಾಚಾರ್ಯರು ಸತ್ಯಮಂಗಲದ ಮುಖಾಂತರ ಈಗಿನ ಚಾಮರಾಜನಗರದ ಬಳಿ ಇರುವ ತೆರಕಣಾಂಬಿಯನ್ನು ತಲುಪಿ, ಸಮಾಧಾನದ ನಿಟ್ಟುಸಿರು ಬಿಟ್ಟರು.

ಅತ್ತ ಕಡೆ, ವೇಂಕಟನಾಥರು ಶ್ರೀರಂಗಕ್ಕೆ ಬರುವಷ್ಟು ಹೊತ್ತಿಗೆ ಅದು ಸ್ಮಶಾನವಾಗಿತ್ತು ಸಾವಿರಾರು ಪ್ರಜೆಗಳ ಕಗ್ಗೊಲೆಯಾಗಿತ್ತು. ಮನೆಮನೆಯನ್ನೂ ಲೂಟಿಮಾಡಿ, ನಗರವನ್ನು ಹಾಳುಗೆಡವಿದ್ದರು ಇನ್ನೂ ವಿರೋಧಿ ಸೈನಿಕರು ನಗರದಲ್ಲಿ ಓಡಾಡುತ್ತಿದ್ದರು.

ವೇಂಕಟನಾಥರು ಕಷ್ಟಪಟ್ಟು ಸುದರ್ಶನಭಟ್ಟರ 'ಶ್ರುತಪ್ರಕಾಶಿಕೆ' ಅವರ ಮಕ್ಕಳನ್ನು ಅಲ್ಲಿಂದ ಕ್ಷೇಮವಾಗಿ ಸಾಗಿಸಲು ಪ್ರಯತ್ನಿಸಿದರು ಊರ ತುಂಬಾ ಹೆಣಗಳು ಅಂತಹ ಹೆಣಗಳ ಮಧ್ಯೆ ಹೆಣಗಳಂತೆ ಇವರೂ 'ಶ್ರುತ ಪ್ರಕಾಶಿಕೆ' ಹಾಗೂ ಸುದರ್ಶನ ಭಟ್ಟರ ಮಕ್ಕಳೊಂದಿಗೆ ಮಲಗಿದ್ದು, ನಾಲ್ಕು ದಿನಗಳ ನಂತರ ಸತ್ಯಮಂಗಲಕ್ಕೆ ತಪ್ಪಿಸಿಕೊಂಡು ಬಂದರು ಅಲ್ಲಿಂದ ಹೊರಟ ಅವರು ತೆರಕಣಾಂಬಿಯನ್ನು ಸೇರಿ, ವಿಷಯಗಳನ್ನೆಲ್ಲ ಆಚಾರ್ಯರಿಗೆ ತಿಳಿಸಿದರು ದೇವಾಲಯಗಳ ನಾಶ, ಶ್ರೀರಂಗದ ರಸ್ತೆ ರಸ್ತೆಗಳಲ್ಲಿ ಹೆಣಗಳ ರಾಶಿ, ಕಾವೇರಿಯೇ ರಕ್ತಸಿಕ್ತವಾದ ವಾರ್ತೆ - ಇತ್ಯಾದಿಗಳನ್ನು ಆಲಿಸಿ, ಅವರು ತತ್ತರಿಸಿದರು ಇದು ನಡೆದದ್ದು ಕ್ರಿ.ಶ ೧೩೧೧ ರಲ್ಲಿ

ವೇಂಕಟನಾಥರನ್ನು ಆ ನಂತರ ತಿರುನಾರಾಯಣಪುರ ಹಾಗೂ ಮುಂದೆ ಪಾಂಡ್ಯರಾಜ್ಯಕ್ಕೆ ಕಳುಹಿಸಲಾಯಿತು.

ಕೆಲವು ಸಮಯದವರೆಗೆ ಲೋಕಾಚಾರ್ಯರು ತೆರಕಣಾಂಬಿಯಲ್ಲೇ, ಇದ್ದು, ಶ್ರೀರಂಗನಾಥನನ್ನು ರಕ್ಷಿಸುತ್ತಾ, ಭಕ್ತರಿಗೆ ಧರ್ಮ ಬೋಧನೆ ಮಾಡುತ್ತಿದ್ದರು ಅವರಿಗೆ ಶ್ರೀರಂಗಕ್ಕೆ ಹೋಗಬೇಕೆಂಬ ಇಷ್ಟವಿತ್ತು ಆದರೆ ಅಲ್ಲಿನ ಪರಿಸ್ಥಿತಿ ಹೇಗಿದೆಯೊ? ಅವರಿಗೆ ತಿಳಿದು ಬರಲಿಲ್ಲ

ಇಷ್ಟರಲ್ಲಿ ಅಲ್ಲಿ ಸುತ್ತಮುತ್ತ ವಿಧರ್ಮೀಯರು ಸುಳಿದಾಡುವ ಸೂಕ್ಷ್ಮತೆಯನ್ನು ತಿಳಿದುಕೊಂಡ ಆಚಾರ್ಯರು ವಿಗ್ರಹಗಳು ಹಾಗೂ ಒಡವೆಗಳನ್ನು ತೆಗೆದುಕೊಂಡು, ಸುರಕ್ಷಿತವೆಂದು ಸುದ್ದಿ ಬಂದ ಬಂಡೀಪುರದ ಕಾಡಿನ ಕಡೆ ಹೊರಟರು ಅಲ್ಲಿ "ಮುಂದಿರಿಪ್ಪೆ" ಎನ್ನುವ ಸುರಕ್ಷಿತವಾದ ಸ್ಥಳವಿದೆಯೆಂದೂ ತಿಳಿದು ಬಂದಿತು ಅಂತೆಯೇ ವಿಗ್ರಹಗಳ ಸಮೇತ ಆ ಕಡೆ ಹೊರಟರು.

ಆದರೆ ಮಾರ್ಗ ಮಧ್ಯದಲ್ಲಿ ಕಳ್ಳರ ಧಾಳಿಯೂ ಆಯಿತು ಕೆಲವೊಂದು ವಸ್ತುಗಳನ್ನು ಕಳೆದುಕೊಂಡರು. ಗೋಪಾಲಸ್ವಾಮಿ ಬೆಟ್ಟವನ್ನು ಏರಿ 'ಮುಂದಿರಿಪ್ಪೆ' ಗುಡ್ಡವನ್ನು ತಲುಪಿ, ವಿಗ್ರಹಗಳು ಹಾಗೂ ನಗನಾಣ್ಯಗಳನ್ನು ಬಚ್ಚಿಟ್ಟರು ರಂಗನಾಥನ ವಿಗ್ರಹವನ್ನು ಮಾತ್ರ ತಮ್ಮೊಂದಿಗೆ ತೆಗೆದುಕೊಂಡು ಆಚಾರ್ಯರು ಪ್ರಯಾಣವನ್ನು ಮುಂದುವರಿಸಿದರು. ಮತ್ತೆ ಕಳ್ಳರ ಧಾಳಿಯಾಯಿತು.

ತಮಿಳುನಾಡನ್ನು ಆಚಾರ್ಯರು ಪ್ರವೇಶಿಸಿದರು. ಕಡೆಗೆ ಎಷ್ಟೋ ಕಷ್ಟಗಳನ್ನು ಅನುಭವಿಸಿ, 'ಜ್ಯೋತಿಷ್ಕುಟಿ' ಎಂಬ ಗ್ರಾಮವನ್ನು ಸೇರಿದರು. ಅಲ್ಲಿ ರಂಗನಾಥರಿಗೆ ಪೂಜಾದಿಗಳು ನಡೆಯತೊಡಗಿದುವು.

ಲೋಕಾಚಾರ್ಯರಿಗೆ ತಮ್ಮ ಹುಟ್ಟೂರಿನ ದೈವ ಶ್ರೀರಂಗದ ರಂಗನಾಥನನ್ನು ಮರೆಯಲಾಗಲಿಲ್ಲ. ಮಧುರೈ ಪತನವಾಗಿ ಅಲ್ಲಿ ಸುಲ್ತಾನನ ಆಳ್ವಿಕೆ ಮುಂದುವರೆದಿತ್ತು ಕಂಪಿಲ ರಾಜ್ಯ ನಿರ್ನಾಮವಾಗಿತ್ತು ಹೊಯ್ಸಳ ರಾಜ್ಯ ಅವನತಿಯ ಹಾದಿಯಲ್ಲಿತ್ತು. ತಾವು ಎಲ್ಲಿದ್ದರೂ ಆಚಾ

ರ್ಯರು ಪ್ರವಚನ, ಧರ್ಮ ಪ್ರಚಾರ ಕಾರ್ಯಗಳನ್ನು ಬಿಡಲಿಲ್ಲ ಧಾಳಿಗೆ ಅನೇಕ ದೇವಾಲಯಗಳು ನಿರ್ನಾಮವಾಗಿದ್ದುವು. ಸಾಧ್ಯವಾದಷ್ಟೂ ದೇವಾಲಯಗಳ ಜೀರ್ಣೋದ್ಧಾರ ಮಾಡಿದರು ತಾವು ರಚಿಸಿದ ಗ್ರಂಥಗಳ ಪುನರ್ ಪರಿಶೀಲನೆ ಕಾರ್ಯವನ್ನು ಮುಂದುವರಿಸಿದರು

ಒಮ್ಮೆ ಶ್ರೀರಂಗಕ್ಕೆ ಹೋಗಬೇಕೆನ್ನಿಸಿತು

ಭೇಟಿ ನೀಡಿದರು ಆದರೆ ಕೈನಲ್ಲಿ ಪ್ರಾಣ ಬಿಗಿ ಹಿಡಿದುಕೊಂಡು ನಿರ್ಜೀವವಾಗಿದ್ದ ಪುಣ್ಯ ನಗರಿಯನ್ನು ನೋಡಿ, ಅವರು ಗಳಗಳನೆ ಅತ್ತುಬಿಟ್ಟರು ಮೊದಲಿನ ಪಾವಿತ್ರ್ಯ ಹೊಳಪು ಅಲ್ಲಿರಲಿಲ್ಲ ತಮ್ಮ ಗುರುಗಳು, ತಂದೆ ತಾಯಿ, ತಮ್ಮ - ಎಲ್ಲರನ್ನೂ ಕಳೆದುಕೊಂಡ ಸ್ಥಳವಾಗಿತ್ತು ಧರ್ಮೋದ್ಧಾರಕ್ಕಾಗಿ ಸುತ್ತಾಡಿ, ಸುತ್ತಾಡಿ ಮಾನಸಿಕ ಪೆಟ್ಟುಗಳನ್ನು ತಿಂದು ಆಚಾರ್ಯರು ದೈಹಿಕ ಹಾಗೂ ಮಾನಸಿಕವಾಗಿ ಜರ್ಝರಿತರಾಗಿದ್ದರು

ಇದ್ದಕ್ಕಿದ್ದಂತೆ ಹೊಸ ಧಾಳಿ ಪ್ರಾರಂಭವಾಯಿತು ಸಜ್ಜನರನ್ನು ರಕ್ಷಿಸಬೇಕೆಂದುಕೊಂಡ ಆಚಾರ್ಯರಿಗೂ ಮೈಗಾಯಗಳಾದುವು. ಬಲವಂತದಿಂದ ಶಿಷ್ಯರು ಅವರನ್ನು ಕರೆದೊಯ್ದರು. 'ಜ್ಯೋತಿಷ್ಮಟಿ'ಯನ್ನು ತಲುಪಿದರು ವಿಧರ್ಮೀಯರ ರುದ್ರನಾಟ್ಯ ನೋಡಲು ಅವರ ಜೀವ ಇಷ್ಟಪಡಲಿಲ್ಲ ದೇವ ಮಂಗಿರಗಳು, ಸಂಸ್ಕೃತಿ, ಜನಜೀವನಕ್ಕೆ ಉಂಟಾದ ಕೊಡಲಿ ಪೆಟ್ಟಿನ ಏಟನ್ನು ತಡೆದುಕೊಳ್ಳಲಾರದಾದರು ವಯಸ್ಸಿಗೆ ಮೀರಿದ ಕಷ್ಟಗಳನ್ನು ಅನುಭವಿಸಿದ್ದ ಅವರು ಈ ಲೋಕವನ್ನು ತ್ಯಜಿಸಲು ನಿರ್ಧರಿಸಿದರು

ಮಧುರೆಯ ಬಳಿ ಅಳಹರ್ ತಿರುಮಲೆಯ 'ವನಗಿರಿ' ಎನ್ನುವ ಗುಪ್ತಸ್ಥಳಕ್ಕೆ ರಂಗನಾಥನ ವಿಗ್ರಹವನ್ನು ಸೇರಿಸುವಂತೆ ಶಿಷ್ಯ ಕೂರಕುಲೋತ್ತಮದಾಸರಿಗೆ ತಿಳಿಸಿದರು ಪರಿಸ್ಥಿತಿಯು ಬೇಗನೆ ತಿಳಿಯಾಗುವುದಿಲ್ಲವೆಂಬ ಭಯ ಅವರಲ್ಲಿತ್ತು. ಹಾಗೇನಾದರೂ ಪರಿಸ್ಥಿತಿ ವಿಷಮಿಸಿದಲ್ಲಿ ರಂಗನಾಥನ ವಿಗ್ರಹವನ್ನು ತಿರುಪತಿಯ ಬೆಟ್ಟದ ಮೇಲಕ್ಕೆ ಗುಪ್ತಮಾರ್ಗದಿಂದ ಸಾಗಿಸುವಂತೆ ಸೂಚನೆ ನೀಡಿದರು.

ಮತ್ತೊಬ್ಬ ಶಿಷ್ಯರಾದ ವಿಳಾಂಶೋಲೈ ಎನ್ನುವವರನ್ನು ಕರೆದು ತಿರುವಂತನಂತಪುರದಲ್ಲಿ ಇದ್ದು, ಅಲ್ಲಿನ ಪದ್ಮನಾಭಸ್ವಾಮಿಯ ರಕ್ಷಣೆ ಮಾಡುವಂತೆ ಮಾರ್ಗಸೂಚಿ ನೀಡಿದರು.

ಪ್ರವಚನಗಳು, ಶ್ರೀವೈಷ್ಣವ ದರ್ಶನ, ತತ್ತ್ವಗಳನ್ನು ಪ್ರಚಾರಮಾಡಲು ಎಲ್ಲ ಕಡೆಗಳಿಗೂ ಹೋಗಬೇಕೆಂದು, ಶ್ರದ್ಧಾಭಕ್ತಿ ನಿಷ್ಠೆಗಳಿಂದ ರಾಮಾನುಜರರ ಸಿದ್ಧಾಂತದ ಪ್ರಚಾರ ಮಾಡಬೇಕೆಂದು ತಮ್ಮ ಪ್ರಮುಖ ಶಿಷ್ಯರಾದ ಮಣಲ್‌ಪಾಕತ್ತು ನಂಬಿಯಾರ್, ಕೊಲ್ಲಿಕಾವಲದಾಸರಾದ ಅಳಗಿಯ ಮಣವಾಳ ಪ್ಪೆರುಮಾಳ್ ಪಿಳ್ಳೈ, ಕೋಟ್ಟೂರಿಲಣ್ಣರ್, ತಿರುಮಲೈಯಾಳ್ವಾರ್ (ತಿರುವಾಯ್‌ಮೊಳಿಪ್ಪಿಳ್ಳೈ), ತಾದರಣ್ಣರ್ (ಮಣವಾಳ ಮಾಮುನಿಗಳ ತಂದೆಯವರು) ರವರಿಗೆ ಆಜ್ಞಾಪಿಸಿದರು

ನಾಲೂರಾಚ್ಚಾನ್ ಪಿಳ್ಳೈ ಹಾಗೂ ಜನನ್ನಾಚಾರ್ಯರನ್ನು ಮೇಲುಕೋಟೆಗೆ ಹೋಗಿ ದರ್ಶನ ಪ್ರಚಾರ ಕಾರ್ಯ, ಅಲ್ಲಿನ ಚೆಲುವನಾರಾಯಣನ ಸೇವೆ ಮಾಡಬೇಕೆಂದು ತಿಳಿಸಿ, ಅವರನ್ನು ಅಲ್ಲಿಗೆ ಕಳುಹಿಸಿದರು

ಹೀಗೆಂದು ಆಜ್ಞಾಪಿಸಿ, ತೃಪ್ತರಾಗಿ, ಸ್ವಾಚಾರ್ಯರ ಶ್ರೀಪಾದಗಳನ್ನು ಧ್ಯಾನಿಸುತ್ತಾ ಪರಮಪದವನ್ನು ಸೇರಿದರು ಅಂದು ಜ್ಯೇಷ್ಠಮಾಸ ಶುಕ್ಲ ಪಕ್ಷದ ದ್ವಾದಶಿ - ಕ್ರಿಶ ೧೩೨೭

ಇವರ ತನಿಯನ್ ಈ ರೀತಿ ಇದೆ-

ಲೋಕಾಚಾರ್ಯಾಯ ಗುರವೇ  
ಕೃಷ್ಣಪಾದಸ್ಯ ಸೂನವೇ  
ಸಂಸಾರ ಭೋಗಿ ಸಂದಷ್ಟ  
ಜೀವ ಜೀವಾತ್ಮವೇ ನಮಃ

ಲೋಕಾಚಾರ್ಯರ ಶಿಷ್ಯರು ಅವರ ಅಷ್ಟಾದಶ ರಹಸ್ಯಗಳನ್ನು ವಿಶೇಷವಾಗಿ ಶ್ರೀ ವಚನ ಭೂಷಣದ ಪ್ರವಚನ, ಉಪನ್ಯಾಸಗಳ ಮೂಲಕ ಪ್ರಚಾರ ಮಾಡಿದರು ಆದುದರಿಂದ ಈ ರಹಸ್ಯಗಳನ್ನು ಸೇವಿಸುವಾಗ ಮಣವಾಳ ಮಾಮುನಿಗಳನ್ನೂ ಸೇರಿಸಿದ ಈ ಶ್ಲೋಕವನ್ನು ಹೇಳುವುದು ರೂಢಿಯಾಗಿದೆ -

ಲೋಕಗುರುಂ ಗುರುಭಿ ಸ್ಸಹ ಪೂರ್ವೈಃ  
ಕೂರಕುಲೋತ್ತಮದಾಸ ಮುದಾರಮ್  
ಶ್ರೀನಗಪತ್ಯಭಿರಾಮವರೇಶಾ-  
ಧೀ ಪ್ರಶಯಂ ವರಯೋಗಿನ ಮಾಡೇ

ಎಂದೇ ಅನುಸಂಧಾನ ಮಾಡುತ್ತಾರೆ ಪಾರಾಂತರವಾಗಿ 'ಕೋಡಿಲುಲಗಾಶಂಯನ್' ಎಂಬಿತ್ಯಾದಿಯಾಗಿ ಮೇಲೆ ತಿಳಿಸಿದವರಿಗೆ ಶಾಂತಿ ಹೇಳಲಾಗುತ್ತಿದೆ.

ಲೋಕಾಚಾರ್ಯರ ವಾಳಿತ್ತಿರುನಾಮವು ಈ ರೀತಿ ಇದೆ-

ಅತ್ತಿಗಿರಿಯರುಳಾಳರ್ ಅನುಮದಿಯೋನ್  
ವಾಳಿಯೇ  
ಐಪ್ಪಶಿಯಿಲ್ ತಿರುವೋಣತ್ತವದರಿತ್ತಾನ್  
ವಾಳಿಯೇ

ಮುತ್ತಿನೆರಿಮಕ್ಕೈತ್ತಮಿಳಾಲ್  
ಮೊಳಿಂದರುಳ್ಳೋನ್ ವಾಳಿಯೇ  
ಮೂದರಿಯ ಮಣವಾಳನ್  
ಮುನ್ಪದಿತ್ತಾನ್ ವಾಳಿಯೇ  
ನಿತ್ತಿಯ ನಂಬಿಳ್ಳೈಪದಮ್  
ನೆಂಜಿಲ್ ವೈಪ್ಪೋನ್ ವಾಳಿಯೇ  
ನೀಳ್ ವಚನ ಭೂಷಣತ್ತಾಲ್  
ನಿಯಮಿತ್ತಾನ್ ವಾಳಿಯೇ  
ಉತ್ತಮಮಾಮ್ ಮುಡುಂಬೈನಗರ್  
ಉದಿತವಳ್ಳಲ್ ವಾಳಿಯೇ  
ಉಲಹಾರಿಯನ್ ಪದಂಗಳ್  
ಊಳಿದೂರುಮ್ ವಾಳಿಯೇ

ಶ್ರೀರಂಗದ ರಂಗನಾಥನಲ್ಲೆ ಜೀವವಿರಿಸಿಕೊಂಡು, ಆತನಿಗಾಗಿಯೇ ಪ್ರಾಣಾರ್ಪಣೆ ಮಾಡಿದ ಲೋಕಾಚಾರ್ಯರ ಜೀವಿತ ಕಾಲದಲ್ಲಿ ಶ್ರೀರಂಗದ ಪುನರುದ್ಧರಣ ಕಾರ್ಯ ನಡೆಯಲಿಲ್ಲ ಈ ಘನಕಾರ್ಯ ನೆರವೇರಿದುದು ಸರಿಯಾಗಿ ಅರವತ್ತು ವರ್ಷಗಳ ನಂತರ ವಿಜಯನಗರ ಸಾಮ್ರಾಜ್ಯದ ಎರಡನೇ ದೊರೆ ಬುಕ್ಕರಾಯನ ಕಾಲದಲ್ಲಿ ೧೩೭೦ ರಲ್ಲಿ ಈ ಕಾರ್ಯವನ್ನು ಸಾಧಿಸಿದವನು ಇವನ ಮಗ ಇಮ್ಮಡಿ ವೀರಕಂಪಣರಾಯ ವಿಜಯನಗರ ಸಾಮ್ರಾಜ್ಯದ ಹಿಂದೂ ರಾಜ್ಯದ ಪುನಃ ಸ್ಥಾಪನೆಯ ಸೂಚಕವಾಗಿ ಮಾಡಿದ ಎರಡು ಘನಕಾರ್ಯಗಳಲ್ಲಿ ಮೊದಲನೆಯದೇ ಶ್ರೀರಂಗ ದೇವಾಲಯದ ಪುನಃ ಪ್ರತಿಷ್ಠಾಪನೆ, ಇನ್ನೊಂದು ಮುಸಲ್ಮಾನರ ವಿನಾಶ ಕಾರ್ಯದಿಂದ ನೆಲಸಮವಾಗಿದ್ದ ಮಧುರೆ ದೇವಾಲಯದ ಜೀರ್ಣೋದ್ಧಾರ ಇವೆರಡೂ ಹಿಂದೂ ಪುನರುತ್ಥಾನದ ಮುಖ್ಯ ಪ್ರಸ್ಥಾನಗಳಾಗಿದ್ದುವು. ಇದೇ ವರ್ಷದಲ್ಲಿ ಮಣವಾಳ ಮಾಮುನಿಗಳು ಜನ್ಮ ತಳೆದದ್ದು, ಇದರ ಹಿಂದಿನ ವರ್ಷವಷ್ಟೇ ವೇದಾಂತದೇಶಿಕರು ಪರಮ ಪದಿಸಿದ್ದು - ಎಂತಹ ಸಂಯೋಗ



# ತುಲಸೀ ಮಹಾತ್ಮೆ

ಕೂಡಲಿ ಜಗನ್ನಾಥಶಾಸ್ತ್ರಿ

ನಮಾಮಿ ಶಿರಸಾ ದೇವೀಂ
ತುಲಸೀಂ ವಿಲಸತ್ತನುಂ
ಯಾಂ ದೃಷ್ಟ್ವಾ ಪಾಪಿನೋ ಮರ್ತ್ಯಾ
ಮುಚ್ಯಂತೇ ಸರ್ವಕಿಲ್ಬಿಷಾತ್

ಯಾರನ್ನು ನೋಡಿದ ಮಾತ್ರದಿಂದಲೇ ಪಾಪಿಯಾದ ಮಾನವನೂ ಸಹ ಸರ್ವಪಾಪಗಳಿಂದಲೂ ಮುಕ್ತನಾಗುತ್ತಾನೆಯೋ ಅಂತಹ ದಿವ್ಯಸ್ವರೂಪಳಾದ ತುಲಸೀದೇವಿಯನ್ನು ತಲೆಬಾಗಿ ನಮಸ್ಕರಿಸುತ್ತೇನೆ.

ಪ್ರಾಚೀನ ಕಾಲದಿಂದಲೂ ವೈದಿಕ ಸಂಪ್ರದಾಯಸ್ಥರು ತುಲಸಿಯನ್ನು ದೈವೀಸ್ವರೂಪವೆಂದು ಭಾವಿಸಿ, ಭಕ್ತಿಯಿಂದ ಪೂಜಿಸುತ್ತಾ ಬಂದಿದ್ದಾರೆ ತುಲಸಿಗೆ ಇರುವಷ್ಟು ಪ್ರಾಶಸ್ತ್ಯ ಇನ್ನಾವ ಸಸ್ಯಕ್ಕೂ ಇಲ್ಲವೆನ್ನುವ ಮಾತು ಅತಿಶಯೋಕ್ತಿಯೇನಲ್ಲ ಈ ಸಸ್ಯಕ್ಕೆ ಅನೇಕ ರೋಗಗಳನ್ನು ನಿವಾರಿಸುವ ಮತ್ತು ವಾತಾವರಣವನ್ನು ಶುದ್ಧಗೊಳಿಸುವ ಶಕ್ತಿ ಇರುವುದು ಅನೇಕ ವೈಜ್ಞಾನಿಕ ಸಂಶೋಧನೆಗಳಿಂದ ದೃಢಪಟ್ಟಿದೆ ಇಂದು ವಿಶ್ವದ ಔಷಧೀಯ ಕ್ಷೇತ್ರದಲ್ಲಿ, ತುಲಸಿಯಿಂದ ತಯಾರಿಸಲ್ಪಡುವ ವಸ್ತುಗಳ ಬಗ್ಗೆ ತಮ್ಮ ಸ್ವಾಮ್ಯವನ್ನು ದೃಢೀಕರಿಸಿಕೊಳ್ಳಲು, ಅಂತರರಾಷ್ಟ್ರೀಯ ಮಟ್ಟದಲ್ಲಿ ಪೈಪೋಟಿ ನಡೆಯುತ್ತಿದೆ ಇದಕ್ಕೆ ಕಾರಣ, ತುಲಸಿಯಲ್ಲಿರುವ ಶ್ರೇಷ್ಠ ಮಟ್ಟದ ಬಹುಮುಖ ಔಷಧೀಯ ಗುಣಗಳು

ತುಲಸೀ ಮಾಹಾತ್ಮೆಗೆ ಸಂಬಂಧಿಸಿದಂತೆ ಕೆಲವು ಪುರಾಣಗಳಲ್ಲಿ ವೈವಿಧ್ಯಮಯವಾದ ಕಥೆಗಳನ್ನು ಹೇಳಲಾಗಿದೆ. ಅವುಗಳನ್ನೆಲ್ಲ ಕ್ರೋಢೀಕರಿಸಿದಾಗ, ಕಥೆ ಈ ರೂಪವನ್ನು ಪಡೆಯುತ್ತದೆ

ಒಮ್ಮೆ ನಾರದರು ವೈಕುಂರಕ್ಕೆ ಬಂದಾಗ, ವಿಷ್ಣುವನ್ನು ಕಂಡು, ತುಳಸಿಯ ಮಹಾತ್ಮೆಯ ಬಗ್ಗೆ ಕೇಳುತ್ತಾ, ಈ ತುಳಸಿ ನಾರಾಯಣನಿಗೆ ಹೇಗೆ ಪ್ರಿಯಳಾದಳು? ಅವಳು ಯಾರು? ಅವಳು ವೃಕ್ಷರೂಪವನ್ನು ಏಕೆ ಪಡೆದಳು? ಎಂದು ಪ್ರಶ್ನಿಸುತ್ತಾರೆ ಆಗ ವಿಷ್ಣುವು ನಗುಮುಖದಿಂದ ತುಳಸೀ ಮಹಾತ್ಮೆಯನ್ನು ಹೇಳುತ್ತಾನೆ

ಗಂಧಮಾವನ ಪರ್ವತ ಪ್ರದೇಶದಲ್ಲಿ ದಾನವವಂಶದ ಧರ್ಮಧ್ವಜ ಎಂಬ ಹೆಸರಿನ ರಾಜನು ರಾಜ್ಯಭಾರ ಮಾಡುತ್ತಿರುತ್ತಾನೆ ಅವನ ಪತ್ನಿಯ ಹೆಸರು ಮಾಧವಿ ಇವಳು ಕಾರ್ತಿಕ ಶುದ್ಧ ಪೌರ್ಣಮಿಯ ದಿನ ಶುಕ್ರವಾರ ಪದ್ಮಾಂಶ ಸಂಭೂತೆಯಾದ ಮಗಳಿಗೆ ಜನ್ಮವೀಯುತ್ತಾಳೆ ಇವಳಿಗೆ ಶ್ರೀಮನ್ನಾರಾಯಣನನ್ನೇ ತನ್ನ ಪತಿಯನ್ನಾಗಿ ಪಡೆಯದೇಕೆಂಬ ಇಚ್ಛೆಯುಂಟಾಯಿತು ಅವಳು ತಂದೆತಾಯಿಗಳ ಅಪ್ಪಣೆಯನ್ನು ಪಡೆದು, ಅರಣ್ಯಕ್ಕೆ ಹೋಗಿ, ಬ್ರಹ್ಮನನ್ನು ಕುರಿತು ತಪಸ್ಸು ಮಾಡುತ್ತಾಳೆ ಇವಳ ಭಕ್ತಿಗೆ ಮೆಚ್ಚಿದ ಬ್ರಹ್ಮನು ಪ್ರತ್ಯಕ್ಷನಾಗಿ, ನಿನ್ನ ಇಚ್ಛೆಯೇನು? ಎಂದು ಕೇಳುತ್ತಾನೆ. ಆಗ ತುಲಸಿಯು - "ಬ್ರಹ್ಮನೇ, ನಾನು ಹಿಂದಿನ ಜನ್ಮದಲ್ಲಿ ಗೋಕುಲದಲ್ಲಿ "ತುಲಸಿ" ಎಂಬ ಹೆಸರಿನಿಂದ, ಕೃಷ್ಣನ ಆತ್ಮೀಯ ಸಖಿಯರಲ್ಲಿ ಒಬ್ಬಳಾಗಿದ್ದೆನು ಕೃಷ್ಣನೊಡನೆ ಹಾಸವಿಲಾಸಗಳಲ್ಲಿ ಕಾಲ ಕಳೆಯುತ್ತಿದ್ದೆನು ಒಂದು ದಿನ, ನಾನು ಕೃಷ್ಣನೊಡನೆ ವಿಲಾಸದಿಂದ ಇದ್ದುದನ್ನು ರಾಧೆಯು ನೋಡಿದಳು ತಕ್ಷಣವೇ ಅವಳಿಗೆ ಕೋಪ ಬಂದು, ನೀನು ಸಾಮಾನ್ಯ ಮಾನವಿಯಾಗಿ ಜನ್ಮತಾಳು ಎಂದು ಶಪಿಸಿದಳು. ಅದರಂತೆ· ನಾನು ಸಾಮಾನ್ಯ ಮಾನವಿಯಾಗಿ ಜನ್ಮ ಪಡೆದಿದ್ದೇನೆ ನಾನು ನಾರಾಯಣನನ್ನು ಪತಿಯನ್ನಾಗಿ ಪಡೆಯಲು ಇಚ್ಛಿಸಿದ್ದೇನೆ ನನ್ನ ಇಚ್ಛೆಯು ಈಡೇರುವಂತೆ, ಅನುಗ್ರಹಿಸು ಎಂದು ಪ್ರಾರ್ಥಿಸುತ್ತಾಳೆ ಆಗ ಬ್ರಹ್ಮನು - "ತುಳಸಿ, ನೀನು ಗೋಕುಲದಲ್ಲಿದ್ದಾಗ, ಸುದಾಮ ಎಂಬ ಹೆಸರಿನ ಗೋಪಿಕುಮಾರನು ಇದ್ದನಲ್ಲವೇ? ಅವನೂ ಸಹ ಕೃಷ್ಣನಿಗೆ ಅತ್ಯಂತ ಪ್ರಿಯ ಸ್ನೇಹಿತನಾಗಿದ್ದನು ನಿನ್ನಂತೆ ಅವನೂ ಸಹ ರಾದೆಯ ಶಾಪಕ್ಕೆ ಗುರಿಯಾಗಿ, ಈಗ, ಶಂಖಚೂಡ ಎಂಬ ಹೆಸರಿನಿಂದ ದಾನವ ವಂಶದಲ್ಲಿ ಜನಿಸಿ, ಈ ಪ್ರದೇಶಕ್ಕೆ ಅರಸನಾಗಿದ್ದಾನೆ ಅವನು ಗೋಕುಲದಲ್ಲಿದ್ದಾಗ ನಿನ್ನನ್ನು ಮೋಹಿಸಿದ್ದನು ಈಗ, ಜನ್ಮಾಂತರೀಯದ ವಾಸನಾ ವಿಶೇಷದಿಂದ ಅವನೇ ನಿನ್ನ ಪತಿಯಾಗುತ್ತಾನ ನಿನಗೂ ಹಿಂದಿನ ಜನ್ಮದ ಅರಿವಿದೆ, ಅವನಿಗೂ ಹಿಂದಿನ ಜನ್ಮದ ಅರಿವಿದ ಅವನು ಜೈಗೀಷವ್ಯ ಎಂಬ ಹೆಸರಿನ ಋಷಿಯಿಂದ ಶ್ರೀಕೃಷ್ಣಮಂತ್ರವನ್ನು ಉಪದೇಶ ಪಡೆದು, ಅದರ ಅನುಷ್ಠಾನ ಬಲದಿಂದ ಅಜೇಯನಾಗಿದ್ದಾನೆ ಮುಂದೆ ನಡೆಯಲಿರುವ ದೇವಾಸುರ ಯುದ್ಧದಲ್ಲಿ ಶಂಖಚೂಡ ಸಾಯುತ್ತಾನೆ. ಪ್ರಾಪಂಚಿಕ ದೃಷ್ಟಿಯಿಂದ ನಿನಗೆ ವೈಧವ್ಯ ಬಂದರೂ, ನೀನು ಈ ಮೊದಲೇ ಶಾಶ್ವತನಾದ ಶ್ರೀಮನ್ನಾರಾಯಣನಿಗೆ ನಿನ್ನನ್ನು ಸಮರ್ಪಿಸಿಕೊಂಡಿರುವುದರಿಂದ ನಿನಗೆ ವೈಧವ್ಯ ದೋಷವು ಬರುವುದಿಲ್ಲ ಅನಂತರ ನೀನು ಶ್ರೀಹರಿಯ ಪ್ರೀತಿಗೆ ಪಾತ್ರಳಾಗಿ, ಅವನ ವಕ್ಷಃಸ್ಥಳವನ್ನು ಸೇರುತ್ತೀಯೆ. ಆಮೇಲೆ ನೀನು ನಾರಾಯಣದ ಅನುಗ್ರಹದಿಂದ ನದಿಯಾಗಿ ಹರಿದು ಗಂಡಕೀ ಎಂಬ ಹೆಸರಿನಿಂದ ಪ್ರಸಿದ್ಧಳಾಗುತ್ತೀಯೆ ಗಂಡಕೀ ನದಿಯಲ್ಲಿ ವಿಷ್ಣುವು ಸಾಲಿಗ್ರಾಮ ರೂಪದಲ್ಲಿರುತ್ತಾ ಸದಾ ನಿನಗೆ ಸಂತೋಷವನ್ನುಂಟು ಮಾಡುತ್ತಿರುತ್ತಾನೆ. ನಿನ್ನ ಕೇಶಗಳು ದೈವೀ ಅಂಶವನ್ನು ಪಡೆದು, ತುಲಸೀ ವೃಕ್ಷಗಳೆಂಬ ಹೆಸರಿನಿಂದ ಸಸ್ಯರೂಪವನ್ನು ಪಡೆದು, ಸಕಲರಿಂದಲೂ ಪೂಜಿಸಲ್ಪಡುತ್ತವೆ ತುಲಸೀ ಸಸ್ಯವಿರುವಲ್ಲಿಯೂ ಸಹ ಸದಾ ವಿಷ್ಣುವಿನ ಸಾನ್ನಿಧ್ಯವಿರುತ್ತದೆ" ಎಂದು ಹೇಳಿ, ಅವಳಿಗೆ ಭಗವತಿ ಶ್ರೀರಾಧಾ ಷೋಡಶಾಕ್ಷರೀ ಮಂತ್ರವನ್ನು ಉಪದೇಶಿಸಿ, ಸತ್ಯಲೋಕಕ್ಕೆ ಹೋಗುತ್ತಾನೆ ಅನಂತರ ತುಳಸಿಯು ಶ್ರೀರಾಧಾ ಷೋಡಶಾಕ್ಷರೀ ಮಂತ್ರವನ್ನು ಪುನಶ್ಚರಣೆ ಮಾಡುತ್ತಾ ಆಶ್ರಮವಾಸಿನಿಯಾಗಿ ಕಾಲಕಳೆಯತೊಡಗುತ್ತಾಳೆ.

ಒಂದು ದಿನ ಶಂಖಚೂಡನು ವನವಿಹಾರ ಮಾಡುತ್ತಾ, ತುಳಸಿಯ ಆಶ್ರಮಕ್ಕೆ ಬರುತ್ತಾನೆ ತುಲಸಿ ಅವನನ್ನು ಆಶ್ರಮದೊಳಕ್ಕೆ ಕರೆದೊಯ್ದು ಅತಿಥಿ ಸತ್ಕಾರ ನೀಡುತ್ತಾಳೆ. ಇವಳ ರೂಪ ಲಾವಣ್ಯಗಳಿಗೆ ಮರುಳಾದ ಶಂಖಚೂಡನು - "ಸುಂದರಿ, ನೀನು ಯಾರು? ನಿನ್ನ ಈ ತಪಸ್ಸಿಗೆ ಕಾರಣವೇನು?" ಎಂದು ಕೇಳುತ್ತಾನೆ. ಅದಕ್ಕೆ ತುಳಸಿ - "ನಾನು ಧರ್ಮಧ್ವಜನ ಪುತ್ರಿ, ತಪಸ್ವಿನಿಯಾಗಿ ಇಲ್ಲಿ ಇದ್ದೇನೆ" - ಎಂದು ಹೇಳಿ - "ನೀನು ಯಾರು?" ಎಂದು ಪ್ರಶ್ನಿಸುತ್ತಾಳೆ ಆ

ಮಾತಿಗೆ ಶಂಖಚೂಡನು - "ನಾನು ದನು ವಂಶದಲ್ಲಿ ಹುಟ್ಟಿದವನು ನನ್ನ ಹೆಸರು ಶಂಖ ಚೂಡ. ನಾನು ರಾಧೆಯ ಶಾಪದಿಂದ ಈ ದಾನವ ಕುಲದಲ್ಲಿ ಹುಟ್ಟಿದ್ದೇನೆ" ಎಂದು ಹೇಳುತ್ತಾನೆ ಆಗ ಆಕೆಗೆ ಬ್ರಹ್ಮನು ಹೇಳಿದ ಮಾತುಗಳೆಲ್ಲವೂ ನೆನಪಾಗುತ್ತವೆ ಅಷ್ಟರಲ್ಲಿ ಬ್ರಹ್ಮನು ಅಲ್ಲಿಗೆ ಬಂದು ಶಂಖಚೂಡನಿಗೆ ತುಲಸಿಯನ್ನು ಗಾಂಧರ್ವ ಪದ್ಧತಿಯಲ್ಲಿ ವಿವಾಹವಾಗುವಂತೆ ತಿಳಿಸುತ್ತಾನೆ ಇದನ್ನು ಒಪ್ಪಿಕೊಂಡ ಶಂಖ ಚೂಡ, ತುಲಸಿಯನ್ನು ವಿವಾಹವಾಗಿ ಅವಳೊಂದಿಗೆ ರಾಜಧಾನಿಗೆ ಬರುತ್ತಾನೆ

ದಾನವರಿಗೂ ದೇವತೆಗಳಿಗೂ ವೈರತ್ವವು ಅನಾದಿಕಾಲದಿಂದಲೂ ಇದೆ ದಾನವನಾದ ಶಂಖಚೂಡನು, ಇತರ ದಾನವರ ಮತ್ತು ಶುಕ್ರಾಚಾರ್ಯರ ಪ್ರೇರಣೆಯಿಂದ ದೇವತೆಗಳ ಮೇಲೆ ಯುದ್ಧ ಮಾಡಿ ಗೆದ್ದು, ಅಮರಾವತಿಯಿಂದ ದೇವತೆಗಳನ್ನು ಓಡಿಸುತ್ತಾನೆ ಆಗ ದೇವತೆಗಳು ಬ್ರಹ್ಮ ಮತ್ತು ಶಿವನನ್ನು ಮುಂದಿಟ್ಟುಕೊಂಡು ವಿಷ್ಣುವಿನ ಬಳಿಗೆ ಬಂದು ತಮಗೆ ಬಂದಿರುವ ದುಸ್ಥಿತಿಯನ್ನು ವಿವರಿಸುತ್ತಾರೆ ಆಗ ವಿಷ್ಣುವು ಅವರಿಗೆ ಅಭಯವನ್ನು ಕೊಡುತ್ತಾ - "ಶಂಖ ಚೂಡನಿಗೆ ಶ್ರೀಕೃಷ್ಣ ಮಂತ್ರದ ಉಪದೇಶವಾಗಿದೆ ಅದನ್ನು ಅವನು ನಿತ್ಯ ಅನುಷ್ಠಾನದಲ್ಲಿ ಇಟ್ಟುಕೊಂಡಿದ್ದಾನೆ ಅದು ಅವನನ್ನು ರಕ್ಷಾಕವಚವಾಗಿ ರಕ್ಷಿಸುತ್ತಿದೆ ಅದರಿಂದ ಅವನು ಅಜೇಯನಾಗಿದ್ದಾನೆ ನಾನು, ಕಾಲವೊದಗಿ ಬಂದಾಗ, ಬ್ರಾಹ್ಮಣ ವೇಷದಲ್ಲಿ ಹೋಗಿ, ಅವನಿಗೆ ರಕ್ಷಾಕವಚವಾಗಿರುವ ಆ ಶಕ್ತಿಯನ್ನು ದಾನವಾಗಿ ಪಡೆಯುತ್ತೇನೆ ನೀವು ಈಗ ಅವನ ಮೇಲೆ ಯುದ್ಧಕ್ಕೆ ಹೋಗಿರಿ " ಎಂದು ಹೇಳುತ್ತಾನೆ

ವೈಕುಂಠದಿಂದ ಹಿಂತಿರುಗಿ ಬಂದ ದೇವತೆಗಳು, ಶಿವನನಾಯಕತ್ವದಲ್ಲಿ ಶಂಖಚೂಡನ ಮೇಲೆ ಯುದ್ಧ ಮಾಡಲು ನಿಶ್ಚಯಿಸುತ್ತಾರೆ ಶಿವನು ಶಂಖಚೂಡನ ರಾಜಧಾನಿಗೆ ಸಮೀಪದಲ್ಲಿರುವ ಚಂದ್ರಭಾಗಾ ನದಿಯ ದಡದಲ್ಲಿ ದೇವತಾಸೈನ್ಯದೊಡನೆ ಬಂದು ಬೀಡು ಬಿಡುತ್ತಾನೆ ಅನಂತರದ ಪುಷ್ಪದಂತ ಎಂಬ ಹೆಸರಿನ ಗಂಧರ್ವರಾಜನ ಮೂಲಕ ತಾನು ಶಂಖ ಚೂಡನ ಮೇಲೆ ಯುದ್ಧಕ್ಕೆ ಬಂದಿರುವುದಾಗಿ ಹೇಳಿ ಕಳಿಸುತ್ತಾನೆ ಪುಷ್ಪದಂತನು ಬಂದು ಶಂಖ ಚೂಡನಿಗೆ ವಿಷಯ ತಿಳಿಸುತ್ತಾನೆ

ಅಂದಿನ ರಾತ್ರಿ ಪತ್ನಿಯಾದ ತುಲಸಿಗೆ, ತಾನು ಶಿವನೊಂದಿಗೆ ಯುದ್ಧ ಮಾಡಬೇಕಾಗಿ ಬಂದಿರುವ ಸಂದರ್ಭವನ್ನು ವಿವರಿಸಿ - "ಪ್ರಿಯೆ, ಕರ್ಮಭೋಗ ನಿಬಂಧನೆಗಳೆಲ್ಲವೂ ಕಾಲಸೂತ್ರದಿಂದ ಬಂಧಿಸಲ್ಪಟ್ಟಿವೆ ಸುಖದುಃಖಗಳು ಕಾಲಾಧೀನವಾದುವುಗಳು" ಎಂದು ಹೇಳುತ್ತಾನೆ ಈ ಮಾತುಗಳನ್ನು ಕೇಳಿ ದುಃಖವಾಯಿತಾದರೂ, ಅವಳಿಗೆ ವಿಧಿವಿಲಾಸವು ತಿಳಿದಿತ್ತಾದ್ದರಿಂದ, ಸಮಾಧಾನ ಚಿತ್ತಳಾಗಿ, ಪತಿಗೆ ಕರ್ತವ್ಯನಿಷ್ಠನಾಗಿರುವಂತೆ ಹೇಳುತ್ತಾಳೆ

ಮಾರನೆಯ ದಿನ ಶಂಖಚೂಡನು ಸೈನ್ಯ ಸಮೇತ ಶಿವನಿದ್ದಲ್ಲಿಗೆ ಬರುತ್ತಾನೆ ಉಭಯ ಸೈನ್ಯಕ್ಕೂ ಯುದ್ಧ ಪ್ರಾರಂಭವಾಗುತ್ತದೆ ಶಂಖಚೂಡನು ನೇರವಾಗಿ ಶಿವನ ಮೇಲೆ ಆಕ್ರಮಣ ನಡೆಸುತ್ತಾನೆ ಈ ಸಮಯಕ್ಕೆ ಸರಿಯಾಗಿ ವಿಷ್ಣುವು ಬ್ರಾಹ್ಮಣನ ವೇಷದಲ್ಲಿ ಬಂದು - "ರಾಜೇಂದ್ರ, ನೀನು ಬೇಡಿದವರಿಗೆ ಬೇಡಿದುದೆಲ್ಲವನ್ನೂ ಕೊಡುವ ಮಹಾದಾನಿ ನನಗಾದರೋ ದುರಾಸೆಯಿಲ್ಲ ಕೊಡುತ್ತೇನೆ ಎಂದು ವಾಗ್ದಾನ ಮಾಡು, ಆಮೇಲೆ ಬೇಡುತ್ತೇನೆ" ಎನ್ನುತ್ತಾನೆ ಆಗ ಶಂಖಚೂಡನು "ಆಗಲಿ" ಎನ್ನುತ್ತಾನೆ ಆಮೇಲೆ ಬ್ರಾಹ್ಮಣನು - "ನಾನು ನಿನ್ನಲ್ಲಿರುವ ಮಂತ್ರರಕ್ಷಾಕವಚವನ್ನು ಬೇಡಲು ಬಂದಿದ್ದೇನೆ" ಎನ್ನುತ್ತಾನೆ. ತಕ್ಷಣವೇ ದಾನವೇಂದ್ರನು "ಕೃಷ್ಣಾರ್ಪಣ" ಎಂದು ಹೇಳಿ ಕೊಟ್ಟುಬಿಡುತ್ತಾನೆ ರಕ್ಷಾಕವಚ ರಹಿತನಾದಾಗ ಶಂಖಚೂಡನು ದುರ್ಬಲನಾಗುತ್ತಾನೆ ಇದನ್ನರಿತ ಶಿವನು, ಶೂಲಾಯುಧವನ್ನು ಪ್ರಯೋಗಿಸುತ್ತಾನೆ ಅಸ್ತ್ರರಹಸ್ಯವನ್ನು ಬಲ್ಲ ಶಂಖಚೂಡನು, ತ್ರಿಶೂಲವು ಬರುತ್ತಿರುವುದನ್ನು ನೋಡಿ, ತನ್ನ ಕೈಯಲ್ಲಿದ್ದ ಧನುಸ್ಸನ್ನು ಎಸೆದು, ಪದ್ಮಾಸನಾಸೀನನಾಗಿ ಕುಳಿತು ಅನನ್ಯ ಭಕ್ತಿಯಿಂದ ಕೃಷ್ಣನನ್ನು ಸ್ಮರಿಸತೊಡಗುತ್ತಾನೆ ತ್ರಿಶೂಲವು ಶಂಖ ಚೂಡನನ್ನು ಸ್ಪರ್ಶಿಸುತ್ತದೆ ಶಂಖಚೂಡನ ದೇಹವು ಕ್ಷಣಮಾತ್ರದಲ್ಲಿ ದಹಿಸಲ್ಪಡುತ್ತದೆ ದಾನವೇಂದ್ರನ ಆತ್ಮಶಕ್ತಿಯು ಶ್ರೀಕೃಷ್ಣ ಲೋಕವನ್ನು ಸೇರುತ್ತದೆ ಅವನ ದೇಹದ ಅಸ್ಥಿಗಳೆಲ್ಲ ಶಂಖರೂಪವನ್ನು ಪಡೆಯುತ್ತವೆ ಈ ಶಂಖಗಳು ದೇವತಾ ಪೂಜಾಕಾರ್ಯದಲ್ಲಿ ಶ್ರೇಷ್ಠ ವಸ್ತುಗಳೆಂದು ಪರಿಗಣಿಸಲ್ಪಡುತ್ತವೆ ಎಲ್ಲೆಲ್ಲಿ ಶಂಖಧ್ವನಿಯಾಗುವುದೋ ಅಲ್ಲಿ ಶ್ರೀ ಲಕ್ಷ್ಮೀನಾರಾಯಣರ ಸಾನ್ನಿಧ್ಯವಿರುತ್ತದೆ

ಇತ್ತ, ಯುದ್ಧರಂಗದಿಂದ ಹೊರಟ ವಿಷ್ಣುವು, ಶಂಖ ಚೂಡನ ರೂಪವನ್ನು ಪಡೆದು, ರಾಜಧಾನಿಗೆ ಬಂದು, ಅರಮನೆಗೆ ಬರುತ್ತಾನೆ ಪತಿಯಾದ

ಶಂಖ ಚೂಡನು ಶತ್ರುವನ್ನು ಜಯಿಸಿ ಬಂದಿದ್ದಾನೆಂದು ಭಾವಿಸಿ, ತುಲಸಿಯು ಅವನನ್ನು ಸಂಭ್ರಮದಿಂದ ಸ್ವಾಗತಿಸಿ, ಅವನ ಕಾಲು ತೊಳೆದು ಒಳಕ್ಕೆ ಕರೆದೊಯ್ದು ಉಪಚರಿಸುತ್ತಾಳೆ ರಾತ್ರಿಯವರೆಗೂ ಅವರಿಬ್ಬರೂ ಸರಸ ಸಲ್ಲಾಪದಲ್ಲಿ ಕಾಲಕಳೆಯುತ್ತಾರೆ ರಾತ್ರಿ ಶಯ್ಯಾಗೃಹದಲ್ಲಿ ಈ ಶಂಖಚೂಡನ ವರ್ತನೆಯನ್ನು ಗಮನಿಸಿದ ತುಳಸಿಗೆ, ಸಂಶಯವುಂಟಾಗಿ, ಇವನು ನಿಜವಾದ ತನ್ನ ಪತಿಯಲ್ಲವೆಂಬುದೂ, ಯಾರೋ ತನ್ನನ್ನು ಮೋಸಗೊಳಿಸಲು ಮಾರುವೇಷದಲ್ಲಿ ಬಂದಿರುವುದು ನಿಶ್ಚಯವೆಂಬುದೂ ದೃಢಪಡುತ್ತದೆ.

ಈವರೆಗೂ ತಾನು ದುಷ್ಟನಾದ ಪರಪುರುಷನೊಂದಿಗೆ ಸರಸಸಲ್ಲಾಪನಡೆಸಿ ಪತಿವ್ರತಾಧರ್ಮವನ್ನು ಭಂಗಗೊಳಿಸಿಕೊಂಡೆನು ಎಂದು ಅವಳಿಗೆ ಭಾಸವಾಗುತ್ತದೆ ತಕ್ಷಣವೇ ಕೋಪದಿಂದ - "ಮಾಯಾವಿ, ನೀನು ಯಾರು? ಮೋಸದಿಂದ ನನ್ನನ್ನು ಭೋಗಿಸಲು ಬಂದಿರುವೆಯಾ? ನನ್ನ ಪಾತಿವ್ರತ್ಯವನ್ನು ಭಂಗಪಡಿಸಿದ ನಿನ್ನನ್ನು ಶಪಿಸಿಬಿಡುತ್ತೇನೆ" ಎನ್ನುತ್ತಾಳೆ ಪತಿವ್ರತೆಯಾದ ತುಲಸಿಯ ಬಿರು ನುಡಿಗಳನ್ನು ಕೇಳಿ ಮಾರುವೇಷದ ವಿಷ್ಣುವಿಗೆ ಹೆದರಿಕೆಯುಂಟಾಗಿ, ತನ್ನ ನಿಜರೂಪದಲ್ಲಿ ಅವಳಿಗೆ ದರ್ಶನಕೊಡುತ್ತಾನೆ ಆ ಸಮಯಕ್ಕೆ ಸರಿಯಾಗಿ ಯುದ್ಧರಂಗದಲ್ಲಿ ಶಿವನಿಂದ ಶಂಖಚೂಡನು ಹತನಾದ ವಿಷಯವೂ ತುಲಸಿಗೆ ತಿಳಿಯುತ್ತದೆ ಆಗ ಅವಳು ಶೋಕತಪ್ತಳಾಗುತ್ತಾಳೆ ಅವಳನ್ನು ಸಮಾಧಾನ ಮಾಡುತ್ತಾ ವಿಷ್ಣುವು - "ಮಂಗಳೆ, ನೀನು ಹಿಂದೆ ಮಾಡಿದ ತಪಸ್ಸಿಗೆ ತಕ್ಕ ಫಲ ಕೊಡುವ ಸಮಯ ಈಗ ಒದಗಿ ಬಂದಿದೆ ಈಗ ನೀನು ಈ ಶರೀರವನ್ನು ತ್ಯಾಗಮಾಡಿ, ದಿವ್ಯ ದೇಹದಿಂದ ನನ್ನ ವಕ್ಷಸ್ಥಳವನ್ನು ಸೇರಿ, ಲಕ್ಷ್ಮಿಗೆ ಸಮಾನಳಾಗಿ ವಿಹರಿಸು ಕೆಲಕಾಲದ ನಂತರ ನಿನ್ನ ದೇಹವು "ಗಂಡಕೀ" ಎಂಬ ಹೆಸರಿನ ನದಿಯಾಗಿ ಭೂಲೋಕದಲ್ಲಿ ಪ್ರವಹಿಸಿ ಪಾಪಿಗಳನ್ನು ಉದ್ಧರಿಸಲಿ, ನಾನು ಆ ನದಿಯಲ್ಲಿ ಸಾಲಿಗ್ರಾಮ ರೂಪದಲ್ಲಿ ವಾಸಮಾಡುತ್ತೇನ ಶಾಪಗ್ರಸ್ತರಾದ ಅನೇಕ ಪುಣ್ಯಜೀವಿಗಳು ಆ ನದಿಯಲ್ಲಿ ಕ್ರಿಮಿಗಳಾಗಿ ಜನ್ಮಪಡೆಯುತ್ತಾರೆ ಅವರು ಸಾಲಿಗ್ರಾಮ ಶಿಲೆಯನ್ನು ಕೊರೆದು ಅದರಲ್ಲಿ ಚಕ್ರಾದಿ ಚಿಹ್ನೆಗಳನ್ನು ಮೂಡಿಸುತ್ತಾರೆ ಭಕ್ತಜನರು ಈ ಶಿಲೆಗಳನ್ನು ಪೂಜಿಸಿ ಮುಕ್ತಿ ಪಡೆಯುತ್ತಾರೆ ಸಾಲಿಗ್ರಾಮವು ಇರುವ ಸ್ಥಳದಲ್ಲಿ ಶ್ರೀಹರಿಯೂ ಇರುತ್ತಾನೆ. ಶ್ರೀಹರಿ ಇರುವಲ್ಲಿ ಶ್ರೀಲಕ್ಷ್ಮಿಯ ಸಾನ್ನಿಧ್ಯವೂ ಇರುತ್ತದೆ ಸಾಲಿಗ್ರಾಮವು ಇರುವ ಗೃಹದಲ್ಲಿ ವಾಸಮಾಡುವ ಮನುಷ್ಯನು ಪುಣ್ಯತೀರ್ಥಗಳಲ್ಲಿ ಸ್ನಾನ ಮಾಡಿದ ಫಲವನ್ನು ಪಡೆಯುತ್ತಾನೆ ಸಾಲಿಗ್ರಾಮವನ್ನು ಪೂಜಿಸುವವನು ಚತುರ್ವೇದ ಪಾರಾಯಣದ ಮತ್ತು ದೀರ್ಘಕಾಲ ಮಾಡಿದ ತಪಸ್ಸಿನ ಫಲವನ್ನು ಪಡೆಯುತ್ತಾನೆ. ಅಷ್ಟೇ ಅಲ್ಲ ಸಾಲಿಗ್ರಾಮವನ್ನು ಪೂಜಿಸುವವನ ಪಿತೃಗಳೆಲ್ಲರೂ ಪುನೀತರಾಗಿ ಅನಂತ ಕಾಲದವರೆಗೆ ವಿಷ್ಣು ಸಾನ್ನಿಧ್ಯವನ್ನು ಪಡೆಯುತ್ತಾರೆ ಸಾಲಿಗ್ರಾಮಕ್ಕೆ ಮಾಡಿದ ಅಭಿಷೇಕದ ತೀರ್ಥವನ್ನು ಪ್ರಾಶನ ಮಾಡಿದವನು ಸರ್ವಪಾಪಗಳಿಂದ ಮುಕ್ತನಾಗುತ್ತಾನೆ" ಎಂದನು ವಿಷ್ಣುವಿನ ಮಾತುಗಳಿಂದ ಸಮಾಧಾನಗೊಂಡ ತುಳಸಿಯು, ಅವನ ಅನುಗ್ರಹದಿಂದ ದಿವ್ಯದೇಹವನ್ನು ಧರಿಸಿ, ವಿಷ್ಣುವಿನ ವಕ್ಷಸ್ಥಳದಲ್ಲಿ ನೆಲೆಸುತ್ತಾಳೆ

ಕೆಲವು ವರ್ಷಗಳ ನಂತರ ತುಳಸಿಯು, ವಿಷ್ಣುವಿನ ಆಜ್ಞೆಯಂತೆ ಗಂಡಕೀ ನದಿಯಾಗಿ ಭೂಲೋಕದಲ್ಲಿ ಹರಿದು ಬರುತ್ತಾಳೆ ವಿಷ್ಣುವು ಸಾಲಿಗ್ರಾಮ ಶಿಲೆಗಳ ರೂಪದಲ್ಲಿ ಆ ನದಿಯಲ್ಲಿ ನೆಲೆಸುತ್ತಾನೆ ಇಂದಿಗೂ ಗಂಡಕೀ ನದಿಯು ಸರ್ವ ಪಾಪಹಾರಿಣಿಯಾಗಿ ಹರಿಯುತ್ತಾ, ತನ್ನಲ್ಲಿ ಮಿಂದವರ ಪಾಪಗಳನ್ನು ನಾಶಮಾಡುತ್ತಿದ್ದಾಳೆ ಆ ನದಿಯಲ್ಲಿರುವ ಸಾಲಿಗ್ರಾಮಗಳನ್ನು ತಂದು ಯಾರು ಪೂಜಿಸುವರೋ ಅವರು ಸರ್ವ ಪಾಪ ಮುಕ್ತರಾಗುತ್ತಿದ್ದಾರ

ತುಲಸಿಯು ದೇಹವು ಗಂಡಕಿ ನದಿಯಾದಂತೆ, ಅವಳ ಕೇಶರಾಶಿಗಳು ವಿಷ್ಣುವಿನ ಅನುಗ್ರಹದಿಂದ, 'ತುಲಸಿ' ಎಂಬ ಸಸ್ಯರೂಪವನ್ನು ಪಡೆದು ಭೂಲೋಕದಲ್ಲಿ ಅವತಾರ ಪಡೆಯುತ್ತದೆ ತುಲಸಿಯ ಗಿಡವಿರುವಲ್ಲಿಯೂ ಸದಾ ವಿಷ್ಣುವಿನ ಮತ್ತು ಲಕ್ಷ್ಮಿಯ ಸಾನ್ನಿಧ್ಯವೂ ಇರುತ್ತದೆ ಅಷ್ಟೇ ಅಲ್ಲ, ಈ ತುಲಸೀ ಸಸ್ಯದಲ್ಲಿ ಶ್ರೀ ತುಲಸೀ ದೇವಿ ಸಂಪೂರ್ಣ ಸಾನ್ನಿಧ್ಯವೂ ಇರುತ್ತದೆ ಈ ಕಾರಣದಿಂದ ತುಲಸಿಯನ್ನು ಪೂಜಿಸುವವರು ಸರ್ವ ಪಾಪಗಳಿಂದಲೂ ಮುಕ್ತರಾಗುತ್ತಾರೆ

ಹೀಗೆ ತುಳಸಿಯು ನದಿಯ ರೂಪದಲ್ಲಿ ಮತ್ತು ವೃಕ್ಷರೂಪದಲ್ಲಿ ಇದ್ದು ನಮ್ಮೆಲ್ಲರ ಪಾಪಗಳನ್ನೂ ಪರಿಹರಿಸುತ್ತಿದ್ದಾಳೆ ಮಹಾಮಹಿಮಳಾದ ತುಳಸಿಯು ಜಗತ್ತಿಗೆ ಸನ್ಮಂಗಳವನ್ನು ಉಂಟುಮಾಡಲಿ

## ಸರ್ವಪಾಪ ನಿವಾರಕ ಶ್ರೀ ತುಲಸೀ ಅಷ್ಟಕ

ವಿಶ್ವೇ ಯತ್ಪ್ರಾಪ್ತಿ ಮಾತ್ರೇಣ
ಭಕ್ತಾನಂದೋ ಭವೇದ್ಧ್ರುವಮ್
ನಂದಿನೀ ತೇನ ವಿಖ್ಯಾತಾ
ಸಾ ಪ್ರೀತಾ ಭವತಾದಿಹ ೧

ಯಸ್ಯಾ ದೇವ್ಯಾಸ್ತುಲಾ ನಾಸ್ತಿ
ವಿಶ್ವೇಷು ನಿಖಿಲೇಷು ಚ
ತುಲಸೀ ತೇನ ವಿಖ್ಯಾತಾ
ತಾಂ ಯಾಮಿ ಶರಣಂ ಪ್ರಿಯಾಮ್ ೨

ಕೃಷ್ಣ ಜೀವನ ರೂಪಾ ಸಾ
ಶಶ್ವತ್ ಪ್ರಿಯತಮಾ ಸತೀ
ತೇನ ಕೃಷ್ಣ ಜೀವನೀ ಸಾ
ಸಾಮೇ ರಕ್ಷತು ಜೀವನಮ್ ೩

ತುಲಸೀಂ ಪುಷ್ಪಸಾರಾಂ ಚ
ಸತೀಂ ಪೂತಾಂ ಮನೋಹರಾಂ
ಕೃತಪಾಪೇಧ್ಮದಾಹಾಯ
ಜ್ವಲದಗ್ನಿ ಶಿಖೋಪಮಾಮ್ ೪

ಪುಷ್ಪೇಷು ತುಲನಾ ಯಸ್ಯಾ
ನಾಸ್ತಿ ವೇದೇಷು ಭಾಷಿತಮ್
ಪವಿತ್ರರೂಪಾ ಸರ್ವಾಸು
ತುಲಸೀ ಸಾ ಚ ಕೀರ್ತಿತಾ ೫

ಶಿರೋಧಾರ್ಯಾ ಚ ಸರ್ವೇಷಾಂ
ಈಪ್ಸಿತಾ ವಿಶ್ವಪಾವನೀ
ಜೀವನ್ಮುಕ್ತಾಂ ಮುಕ್ತಿದಾಂ ಚ
ಭಜೇತಾಂ ಹರಿಭಕ್ತಿದಾಮ್ ೬

ವೃಂದಾ ವೃಂದಾವನೀ
ವಿಶ್ವಪೂಜಿತಾ ವಿಶ್ವಪಾವನೀ
ಪುಷ್ಪಸಾರಾ ನಂದಿನೀ ಚ
ತುಲಸೀ ಕೃಷ್ಣಜೀವನೀ ೭

ಏತನ್ನಾಮಾಷ್ಟಕಂ ಚೈವ
ಸ್ತೋತ್ರಂ ನಾಮಾರ್ಥ ಸಂಯುತಮ್
ಯಃ ಪಠೇತ್ ತಾಂ ಚ ಸಂಪೂಜ್ಯ
ಸೋಽಶ್ವಮೇಧ ಫಲಂ ಲಭೇತ್ ೮

* * *

ಸಂದರ್ಶಿಸಿ. ಆನಂದಿಸಿ.

## ಶ್ರೀ ವೆಂಕಟೇಶ್ವರಸ್ವಾಮಿ ಆಲಯ, ತಿರುಮಲೆ.

# ವಾರ್ಷಿಕ ಪುಷ್ಪಯಾಗ

15-11-99

---

14-11-99 ಭಾನುವಾರ ಅಂಕುರಾರ್ಪಣೆ

15-11-99 ಸೋಮವಾರ ಪುಷ್ಪಯಾಗ

15-11-99 ರಂದು ಸಂಜೆ ಪುಷ್ಪಪಲ್ಲಕ್ಕಿ ಸೇವೆ.

---

ಸೂಚನೆ : ಪುಷ್ಪಯಾಗದಲ್ಲಿ ಆರ್ಜಿತ ಸೇವಾಶುಲ್ಕವನ್ನು ನೀಡಿ ಗೃಹಸ್ಥರು ಭಾಗವಹಿಸಬಹುದಾಗಿದೆ ತಾವು ತಮ್ಮ ಬಳಿಯ ತಿ.ತಿ ದೇ. ವಿಚಾರಣಾಕೇಂದ್ರದಲ್ಲಿ ಈ ಬಗ್ಗೆ ವಿಚಾರಿಸಬಹುದು

ನೀವೂ ಬನ್ನಿ. ನಿಮ್ಮವರನ್ನೂ ಕರೆತನ್ನಿ.

---

## ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ.

# ಸ್ನೇಹಲತಾ ಸದನ - ತಿರುಮಲೆ

# ದಿನವಹಿ ಬಾಡಿಗೆ ವಿವರ

ತಿರುಮಲೆಯ ಶ್ರೀ ಪದ್ಮಾವತೀ ಅತಿಥಿಗೃಹ ಪ್ರಾಂತ್ಯದಲ್ಲಿ ನೂತನವಾಗಿ ಪೋದ್ದಾರ್ ವಂಶಸ್ಥರು ನಿರ್ಮಿಸಿರುವ ದಾನದ ಕಾಟೇಜು ಸಮುದಾಯ 'ಸ್ನೇಹಲತಾಸದನ'ದಲ್ಲಿನ ಕೊಠಡಿಗಳು ಎಲ್ಲವೂ ಹವಾನಿಯಂತ್ರಿತವಾಗಿ ಸುಸಜ್ಜಿತವಾಗಿ, ಸೌಲಭ್ಯಯುಕ್ತವಾಗಿದ್ದು ಇಲ್ಲಿನ ಕೋಣೆಗಳ 24 ಗಂಟೆಗಳ ಬಾಡಿಗೆಗಳು ಈ ರೀತಿಯಿವೆ

| | | |
|---|---|---|
| ನಾಲ್ಕು ಹಾಸಿಗೆಗಳ ಮಾಸ್ಟರ್ ಸೂಟ್ | ದಿನಂಪ್ರತಿ | ರೂ. 2500/- |
| ಸೂಟ್ ನಂ 7 ನಾಲ್ಕು ಹಾಸಿಗೆಗಳದ್ದು (ಕೆಳಗಡೆಯ ಮಾಸ್ಟರ್ ಸೂಟ್) | ದಿನಂಪ್ರತಿ | ರೂ. 2000/- |
| ಸೂಟ್ ನಂ 12 (ಎರಡು ಹಾಸಿಗೆಗಳ ಹವಾನಿಯಂತ್ರಿತವಲ್ಲದ ಕೋಣೆ) | | ರೂ 500/- |
| ಮಿಕ್ಕ ಸೂಟ್‌ಗಳು - ಎರಡು ಹಾಸಿಗೆಗಳದ್ದು | ದಿನಂಪ್ರತಿ | ರೂ. 1500/- |

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ.

ತಿ. ತಿ. ದೇ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

ಆಂಗ್ಲ ಮೂಲ - ಡಾ|| ಎನ್. ರಮೇಶನ್.

ಕನ್ನಡಾನುವಾದ - ಬಿ. ಎನ್. ಶ್ರೀನಿವಾಸನ್.

(ಮುಂದುವರೆದಿದೆ)

## ದಾನಿಗಳ ವರ್ಗೀಕೃತ ತಖ್ತೆ :

ತಿರುಮಲೆಯ ಆಲಯ ಶಾಸನಗಳು ದಾನಿಗಳ ಪೂರ್ಣ ವಿವರಗಳನ್ನು ನೀಡುತ್ತವೆ ದಾನವು ಗ್ರಾಮ ದಾನವಾಗಬಹುದು ಅಥವಾ ಧನದಾನವಾಗಬಹುದು ಈ ದಾನಿಗಳನ್ನು 28 ವಿಭಾಗಗಳಲ್ಲಿ ವಿಂಗಡಿಸಬಹುದು.

1 ವಿಜಯನಗರದ ಸಾಮ್ರಾಟರು
2 ರಾಣಿ (ಕಿರಿಯ ರಾಣಿ).
3 ರಾಣಿ (ಪಟ್ಟದ ರಾಣಿ)
4 ಪ್ರಾಂತ್ಯ ಪಾಲ (ರಾಜ್ಯಪಾಲ)
5 ಪ್ರಧಾನಿ
6 ಪ್ರಧಾನಿಯ ಕುಟುಂಬ
7 ಸಕಲ ಸೈನ್ಯಾಧಿಪತಿ
8 ದಳಪತಿಗಳು.
9 ಅರಮನೆ ಅಧಿಕಾರಿ
10 ರಾಜಾಧಿಕಾರಿ
11 ರಾಜ ಪುರೋಹಿತ
12. ಸಾಮಂತ ರಾಜರು ಮತ್ತಿತರ ಅಧೀನ ಅಧಿಕಾರಿಗಳು.
13. ಕಂದಾಯಾಧಿಕಾರಿ.
14 ಭೂಹಿಡುವಳಿ ಅಧಿಕಾರಿ.

### ಭೂಮಿದಾನ ವಿವರ

| ಸಂಖ್ಯೆ | ದಾನಿ | ದಾನದ ರೀತಿ | ಕೃಷ್ಣ ರಾಯನ ಕಾಲ | ಅಚ್ಯುತ ರಾಯನ ಕಾಲ | ಸದಾಶಿವ ರಾಯನ ಕಾಲ | ಒಟ್ಟು |
|---|---|---|---|---|---|---|
| 1 | ರಾಜ, ರಾಣಿ, ರಾಜ್ಯಪಾಲ ಮತ್ತಿತರರು | ರಾಜ ಭೋಗದ ಭೂಮಿ | 12 | 10 | 40 | 62 |
| 2. | ಆಚಾರ್ಯ ಪುರುಷರು ವಾಗ್ಗೇಯಕಾರರು ಮತ್ತಿತರರು | ದತ್ತಿ ನೀಡಿದ ಭೂಮಿ | 5 | 19 | 18 | 42 |
| 3 | ಇತರರು | ರೈತಭೋಗದ ಭೂಮಿ | 1 | 6 | 3 | 10 |
| | | ಒಟ್ಟು | 18 | 35 | 61 | 114 |

### ಹಣ ಕಾಸಿನ ದಾನಗಳು

| ಸಂಖ್ಯೆ | ದಾನಿಗಳು | ಕೃಷ್ಣದೇವರಾಯನ ಕಾಲ ಧನದಮೊತ್ತ - ಶೇಖಡ | ಅಚ್ಯುತರಾಯನಕಾಲ ಮೊತ್ತ - ಶತಾಂಶ | ಸದಾಶಿವರಾಯನಕಾಲ ಮೊತ್ತ - ಶತಾಂಶ |
|---|---|---|---|---|
| 1 | ರಾಜ, ರಾಣಿ, ರಾಜಪ್ರತಿನಿಧಿ ರಾಜ್ಯ ನೌಕರರು | 51400 - 33 | 308705 - 65 | 38680 - 20.5 |
| 2. | ಜೀಯರ್, ಆಚಾರ್ಯ ಮೊದಲಾದ ಆಲಯ ರಾಜ್ಯ ನೌಕರರು | 40681 - 26 | 109898 - 24 | 42371 - 23.5 |
| 3 | ವರ್ತಕರು ಭಕ್ತರು ಮತ್ತಿತರರು ರಾಜ್ಯ ನೌಕರರು | 53185 - 41 | 51988 - 11 | 108555 - 56 |
| | | 145356 - 100 | 470591 - 100 | 189706 - 100 |

15 ಮತ್ತೊಬ್ಬ ಅಧಿಕಾರಿ
(ಕಾರ್ಯಪರಿಚಯವಿಲ್ಲ).
16 ಜೀಯರು
17. ಏಕಾಂಗಿ ಶ್ರೀವೈಷ್ಣವರು
18. ಆಚಾರ್ಯ ಪುರುಷರು
ಹಾಗೂ ಧರ್ಮಗುರುಗಳು.
19 ಸಭೆಯರ್ (ಪಂಚಾಯತಿ ಸದಸ್ಯರು)
20. ವೈದಿಕ ಬ್ರಾಹ್ಮಣರು
21 ಕವಿ ಕುಟುಂಬ.
22 ವಾಗ್ಗೇಯಕಾರರು
23 ವಿದ್ವಾಂಸರು
24 ನಂಬಿಮಾರ್ (ಆಲಯ ಅರ್ಚಕರು)
25 ಮಧ್ವ ಆಚಾರ್ಯರು
26 ನಾಗರಿಕರು ಹಾಗೂ ವರ್ತಕರು
27 ಖಾಸಗಿ ಭಕ್ತರು
28. ಇತರ ಯಾತ್ರಿಕರು (?)

ಎರಡು ಪಟ್ಟಿಗಳಲ್ಲಿನ ದಾನಿಗಳ ಹಾಗೂ ದಾನದ ಜಮೀನು ಹಾಗೂ ಧನದ ಮೊತ್ತಗಳನ್ನು ಗಮನಿಸುವಾಗ ಕೆಳಕಂಡ ಅಂಶಗಳನ್ನು ಗಮನಿಸಬೇಕಾಗುತ್ತದೆ

ಎ) ಆಲಯಕ್ಕೆ ನೀಡಲಾಗಿದ್ದ ಭೂಮಿಯ ಒಟ್ಟು ಆದಾಯವೆಷ್ಟು ಹಾಗೂ ಈ ಆದಾಯವು ಅಂದಿಗೆ ಪ್ರಚಲಿತ ವಿದ್ದಂತಹ ಆಚಾರಗಳನ್ನು ಉತ್ಸವಗಳನ್ನು ನಡೆಸಲು ಸಾಕಾಗುತ್ತಿದ್ದಿತೇ?

ಬಿ) ಆಲಯವು ಆದಾಯವನ್ನು ಹೆಚ್ಚಿಸಿಕೊಳ್ಳಲು ಇದ್ದಂತಹ ಇತರ ಧನಮೂಲಗಳು ಯಾವುವು? ಇದರಿಂದ ಆಲಯವನ್ನು ಒಂದು ಜೀವಂತ ಸಂಸ್ಥೆಯಾಗಿಡಲು ಸಾಧ್ಯವಿದ್ದಿತೇ?

ಸಿ) ಆಲಯದ ಪಾರುಪತ್ಯಗಾರರು - ಕೆಲಸಗಾರ ಧರ್ಮದರ್ಶಿಗಳು ಆಲಯದ ಪರವಾಗಿ ದಾನ ದತ್ತಿಗಳನ್ನು ಸ್ವೀಕರಿಸುವಷ್ಟಕ್ಕೇ ಸೀಮಿತರಾಗಿದ್ದರೆಂದು ಸಾಮಾನ್ಯವಾಗಿ ಭಾವಿಸುವುದರ ಹಿನ್ನೆಲೆಯಲ್ಲಿ ಇವರುಗಳು ತಾವೇ ಸ್ವತಃ ದಾನ ದತ್ತಿಗಳನ್ನು ಆಲಯಕ್ಕೆ ನೀಡಿದಾಗ ಉಂಟಾಗುತ್ತಿದ್ದ ಆರ್ಥಿಕ ಷರತ್ತುಗಳು, ನಿಯಮಗಳು ಯಾವುವು?

ಡಿ) ಕೃಷ್ಣರಾಯನ ಕಾಲ ಹಾಗೂ ಸದಾಶಿವರಾಯರ ಕಾಲಕ್ಕಿಂತಲೂ ಮಧ್ಯದಲ್ಲಿ ಬಂದ ಅಚ್ಯುತರಾಯನ ಕಾಲದಲ್ಲಿ ಆಲಯಕ್ಕೆ ಧನಾದಾಯ ಹೆಚ್ಚಾಗಲು ಕಾರಣಗಳೇನು?

ಇ) ಧನದ ದಾನಗಳು ಬಂದಾಗ ಅವುಗಳ ಬದಲಿಗೆ ಪೂಜೆ ಉತ್ಸವಗಳ ಏರ್ಪಾಡು ಮಾಡುವಲ್ಲಿ ಈ ಧನದಾನ ಒಂದೇ ಬಾರಿಗೆ ವೆಚ್ಚವಾಗುವಂತೆ ಬಳಕೆ ಆಗುತ್ತಿದ್ದಿತೋ ಅಥವಾ ಅನೇಕ ದಾನಗಳಲ್ಲಿ ವಿಶೇಷವಾಗಿ ಉಲ್ಲೇಖವಾಗಿರುವಂತೆ ಯಾವುದಾದರೂ ಒಂದು ರೀತಿಯ ಆದಾಯ ನಿರಂತರವಾಗಿ ಬರುವಂತೆ ಮೂಲಧನವಾಗಿ ಈ ದಾನದ ಧನ ಬಳಕೆ ಆಗುತ್ತಿದ್ದಿತೋ? ಜೊತೆಗೇ ಈ ಬಂಡವಾಳದ ಮೇಲೆ ಉಂಟಾಗುತ್ತಿದ್ದ ಉತ್ಪನ್ನದ ಆದಾಯದ ಲಕ್ಷಣವೇನಾಗಿದ್ದಿತು?

ಎಫ್) ಮೇಲಿನ ಆರ್ಥಿಕ ವಿಶ್ಲೇಷಣೆಯಿಂದ 16 ನೇ ಶತಮಾನದ ಸಾಮಾನ್ಯ ಜನತೆಯ ಸಾಮಾಜಿಕ ಜೀವನದಲ್ಲಿ ಎಂತಹ ಪ್ರಭಾವ - ಹಾಗೊಮ್ಮೆ ಇದ್ದರೆ - ಉಂಟಾಗಿದ್ದಿರಬಹುದು

ಮೇಲಿನ ಪ್ರಶ್ನೆಗಳಲ್ಲಿ ಕೆಲವಕ್ಕೆ ಶಾಸನಗಳ ಎಚ್ಚರಿಕೆಯಿಂದ ಕೂಡಿದ ಅಧ್ಯಯನದಿಂದ ಉತ್ತರಗಳು ದೊರೆಯುತ್ತವೆ

ಕ್ರಿ ಶ 1510 ರಿಂದ 1570 ರವರೆಗೆ ಆಲಯಕ್ಕೆ ದಾನವಾಗಿ ಬಂದ ಗ್ರಾಮಗಳು 115 ಆದರೆ ಅವುಗಳಲ್ಲಿನ 54 ಶತಾಂಶ ಎಂದರೆ 62 ಗ್ರಾಮಗಳು ರಾಜಭಂಡಾರ ದಾನಗಳಾಗಿದ್ದು ಹೆಚ್ಚಿನ ಭಾಗ ರಾಜಪುರುಷರ, ರಾಣಿಯರ, ರಾಜರ ದಾನಗಳಾಗಿ ಆಲಯಕ್ಕೆ ನೀಡಲ್ಪಟ್ಟವು. ಎರಡನೆಯ ವರ್ಗದವರಿಂದ ಈ 115 ರಲ್ಲಿ 43 ಗ್ರಾಮಗಳು ದಾನವಾಗಿ ಬಂದವು ಎಂದರೆ 37 ಶತಾಂಶ ಒಟ್ಟಿಗೆ ತೆಗೆದುಕೊಂಡರೆ ರಾಜಪುರುಷರ ಆಚಾರ್ಯರ ದಾನಗಳಲ್ಲಿ 105 ಗ್ರಾಮಗಳು ಬಂದಿದ್ದು ಆಲಯಕ್ಕೆ ದಾನವಾಗಿ ಬಂದ ಗ್ರಾಮಗಳ 91 ಶತಾಂಶ ಭಾಗವಾಗುತ್ತದೆ (1509 ರಿಂದ 1568 ವರೆಗೆ) ಆಲಯಕ್ಕೆ ಸೇರಿದ ಸಾಮ್ರಾಜ್ಯದ ರಾಜಕೋಶದ ನೇರ ಜಮೀನುಗಳು ಹಾಗೂ ಸೇವೆಯ ಹಿಡುವಳಿ ಗ್ರಾಮಗಳ ಆದಾಯವನ್ನು ಎರಡು ಭಾಗವಾಗಿ ಮಾಡಲಾಗಿದ್ದಿತು. ಮೇಲ್ ವರಂ (ಮುಖ್ಯ ಭಾಗ) ಹಾಗೂ ಕುಡಿ ವರಂ ಅಥವಾ ಕೀಳ್‌ವರಂ (ಚಿಕ್ಕಭಾಗ) ಗ್ರಾಮಗಳ ಮುಖ್ಯ ಆದಾಯವನ್ನು - ಮೇಲ್‌ವರಂ ಅನ್ನು ರಾಜ್ಯದ ಅಥವಾ ಸೈನ್ಯದ ಬಳಕೆಗಾಗಿ ಕೀಳ್‌ವರಂ ಅನ್ನು ಜಮೀನಿನ ದೇಸಾಯಿಗಾರರು ಸ್ವಂತಕ್ಕೆ ಬಳಸುವಂತೆ ಪದ್ಧತಿಯಿತ್ತು ಗ್ರಾಮಗಳ ವಾರ್ಷಿಕ ಆದಾಯದಲ್ಲಿ ಈ ಎರಡು ರೀತಿಯ ಪರಂಪರೆಯಿಂದ ಬಂದ ವಿಭಜನೆಯನ್ನು ಈಗಾಗಲೇ ಗುರುತಿಸಲಾಗಿದೆ ಇಂತಹ ಗ್ರಾಮಗಳನ್ನು ಆಲಯಕ್ಕೆ ದಾನ ನೀಡಿದಾಗ ಮುಖ್ಯ ಹಾಗೂ ಚಿಕ್ಕ ಭಾಗಗಳನ್ನು ಹಾಗೆಯೇ ಉಳಿಸಿಕೊಂಡು ದೇವಾದಾಯದ ಭೂಮಿಯ ಈ ಮುಖ್ಯಭಾಗದ ಆದಾಯವನ್ನು ಆಲಯಕ್ಕೆ ನೀಡಲಾಗುತ್ತಿದ್ದಿತು ಚಿಕ್ಕ ಭಾಗ ಮಾತ್ರ ಮೊದಲಿನಂತೆಯೇ ದೇಸಾಯಗಾರನ ಪಾಲಿಗೇ ನಿಂತಿತು

ಜಮೀನು ದಾನ ನೀಡುವ ಒಂದು ಉದ್ದೇಶವೆಂದರೆ ಆಲಯಕ್ಕೆ ಒಂದು ಉತ್ಸವ ಸೇವೆಯನ್ನು ನಡೆಸಲು ನಿರಂತರವಾದ ನಿತ್ಯವಾದ ಆದಾಯವನ್ನು ಒದಗಿಸುವುದಾಗಿದ್ದಿತು ಹೀಗೆ ಆದಾಯದ ಪ್ರಾವಧಾನ ಮಾಡುವುದರೊಡನೆಯೇ ಇಂತಹ ಗ್ರಾಮಗಳು, ದಾನದಲ್ಲಿ ಬಂದಂತಹ ಹಣವನ್ನು ತೊಡಗಿಸಲು ಅವಕಾಶವನ್ನೂ ಒದಗಿಸಿದವು. ತಿರುಮಲೆಯ ಆಲಯದ ಶಾಸನಗಳು ಹಾಗೂ ಇದೇ ಕಾಲದ ದಕ್ಷಿಣ ಇಂಡಿಯಾದ ಇತರ ಆಲಯಗಳ ಶಾಸನಗಳ ಪರಿಶೀಲನೆಯಿಂದಾಗಿ ತಿಳಿಯುವ ಅಂಶವೆಂದರೆ ತಿರುಮಲೆಯ ದಾನದ ಗ್ರಾಮಗಳು ತಮ್ಮಲ್ಲಿ ಬಂಡವಾಳ ತೊಡಗಿಸುವ ಹಾಗೂ ಅಭಿವೃದ್ಧಿಯಲ್ಲಿ ಕೆಲಸ ಮಾಡುವ ರೀತಿಯಲ್ಲಿ ಇತರ ಆಲಯ ಭೂಮಿಗಳಿಗಿಂತ ಬೇರೆಯಾದ ಲಕ್ಷಣವನ್ನು ಹೊಂದಿದ್ದವು. ಅಭಿವೃದ್ಧಿಯ ಕಾರ್ಯಕ್ರಮದಲ್ಲಿ ಆಲಯ ಗ್ರಾಮಗಳ ಒಂದು ಸೀಮಿತ ರೂಪವೆಂದರೆ ದಾನಿಯು ತಾನು ದಾನ ಮಾಡಿದ ಗ್ರಾಮದ ಒಡೆತನವನ್ನು ಹೊಂದಿರುವಂತೆಯೇ ಅದರ ಆದಾಯದ ಒಂದು ಭಾಗವನ್ನು ಆಲಯಕ್ಕೆ ಕಡ್ಡಾಯವಾಗಿ ನೀಡಬೇಕಿದ್ದಿತು ತಿರುಮಲೆಯ ಆಲಯ ಶಾಸನಗಳಲ್ಲಿ ಮೂರು ಶಾಸನಗಳು ಮಾತ್ರವೇ ಈ ರೀತಿಯವು. ಮತ್ತೊಂದು ರೀತಿಯ ಗ್ರಾಮ ದಾನದಲ್ಲಿ ಗ್ರಾಮದ ಅಭಿವೃದ್ಧಿಯಲ್ಲಿನ ಪಾತ್ರ ನಗಣ್ಯವಾಗಿ, ಒಂದು ಖಚಿತವಾದ ಪೂರ್ವನಿರ್ಧಾರಿತ ಮೊತ್ತವನ್ನು ವಾರ್ಷಿಕವಾಗಿ ಆಲಯಕ್ಕೆ ನೀಡವಷ್ಟಕ್ಕೇ ಸೀಮಿತವಾಗಿ, ಅದರ ಫಲಾನುಭವಿಗಳ ಯಾವುದೇ ಗೋಜಿಗೂ ಹೋಗದಿರುವುದಾಗಿದ್ದಿತು ಇದನ್ನು ಶ್ರೋತ್ರೀಯ ದಾನವೆನ್ನುತ್ತಿದ್ದರು ಶ್ರೋತ್ರೀಯ ದಾನದ ಗ್ರಾಮದವರು ರಾಜ್ಯಸರ್ಕಾರದಿಂದ ತಮ್ಮ ಯಾವುದೋ ಸೇವೆಯ ಪ್ರತಿಯಾಗಿ ಈ ಸವಲತ್ತು ಪಡೆಯುತ್ತಿದ್ದರು ತಿರುಮಲೆಯ ಆಲಯದ ಶಾಸನಗಳ ಪ್ರಕಾರ ಇಂತಹ ಎರಡು ದಾನಗಳು 1514 ರಲ್ಲಿ ದಾಖಲೆಯಾದವು. ಕನಿಯಾಚಿ ಹಾಗೂ ಶ್ರೋತ್ರೀಯ ದಾನಗಳಿಂದಾಗಿ ಗ್ರಾಮದ ವಾರ್ಷಿಕ ಆದಾಯದ ಪ್ರಮಾಣ ಎಷ್ಟೇ ಇದ್ದಿರಬಹುದಾದರೂ ಆಲಯಕ್ಕೆ ಮಾತ್ರ ಒಂದು ನಿರ್ದಿಷ್ಟ ಮೊತ್ತ ಸೇರುವಂತೆ ಆಗಿದ್ದಿತು.

(ಮುಂದುವರೆಯುವುದು)



# ಬ್ರಹ್ಮೋತ್ಸವ-1999



ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ವಾರ್ಷಿಕ ಬ್ರಹ್ಮೋತ್ಸವಗಳು ಸೆಪ್ಟಂಬರ್ 13 ರಿಂದ 21 ವರೆಗೆ ಯಶಸ್ವಿಯಾಗಿ ನಡೆದು ಆರು ಲಕ್ಷಮಂದಿಗೂ ಹೆಚ್ಚಿನ ಮಂದಿಯನ್ನು ಆಕರ್ಷಿಸುವಲ್ಲಿ ಸಫಲವಾದವು. ಒಂಭತ್ತು ದಿನಗಳ ಬೆಳಗು ಸಂಜೆಗಳಲ್ಲಿ ವಿವಿಧ ವಾಹನಗಳಲ್ಲಿ ತಿರುಮಲೆಯ ರಥಬೀದಿಯಲ್ಲಿ ಸ್ವಾಮಿ ಮೆರವಣಿಗೆಯಲ್ಲಿ ಆಗಮಿಸಿ ಭಕ್ತರ ನೇತ್ರ ಮನಗಳಿಗೆ ಆನಂದವನ್ನು ವರ್ಷಿಸಿದರೆಂದು ಹೇಳಲಾಗಿದೆ

ತಿರುಮಲೆಯಲ್ಲಿಯೇ ಅಲ್ಲದೆ ತಿರುಪತಿಯಲ್ಲಿಯೂ ಬ್ರಹ್ಮೋತ್ಸವಗಳಲ್ಲಿ ಹಬ್ಬದ ಸಂಭ್ರಮದ ವಾತಾವರಣವಿದ್ದಿತು. ಹೆಚ್ಚು ಹೆಚ್ಚು ಯಾತ್ರಿಕಗಣ ತಿರುಪತಿಗೆ ಆಗಮಿಸುತ್ತಿದ್ದಂತೆ ಅವರಿಗೆ ಬೆಟ್ಟಕ್ಕೆ ಹೊರಡಲು ಪ್ರತ್ಯೇಕ ಬಸ್‌ಗಳ ವ್ಯವಸ್ಥೆ, ಬಸ್ ನಿಲ್ದಾಣ ರೈಲ್ವೆ ನಿಲ್ದಾಣಗಳಿಂದಲೇ ಉತ್ಸವ ವಿವರಗಳನ್ನೂ, ಉತ್ಸವದ ಏರ್ಪಾಡುಗಳನ್ನು, ವಿವರಿಸಿ ತಿಳಿಸುವ ಏರ್ಪಾಡುಗಳನ್ನೂ ಮಾಡಲಾಗಿದ್ದಿತು ತಿರುಪತಿಯಲ್ಲಿ ಹೊರ ಊರುಗಳ ದಾರಿಯಲ್ಲಿ ದೂರದಿಂದಲೇ ಯಾತ್ರಿಕರನ್ನು ಸ್ವಾಗತಿಸುವ ಬ್ರಹ್ಮೋತ್ಸವ ದ್ವಾರಗೋಪುರಗಳೂ, ಕಮಾನುಗಳೂ, ವಿದ್ಯುದ್ದೀಪಾಲಂಕಾರಗಳೂ, ಏರ್ಪಾಡಾಗಿದ್ದವು. ತಿರುಪತಿ - ತಿರುಮಲೆಗಳಲ್ಲಿ ಆಯಕಟ್ಟಿನ ಸ್ಥಳಗಳಲ್ಲಿ ಸೊಗಸಾದ ವಿದ್ಯುದ್ದೀಪ ಚಿತ್ರಗಳು ಭಗವಂತನ ಹಲವು ಅವತಾರಗಳನ್ನು ಪರಿಚಯ ಮಾಡಿಕೊಡುವಂತಿದ್ದವು. ಹೆಚ್ಚಿದ ಜನಕ್ಕೆ ತಕ್ಕಂತೆ ಆರೋಗ್ಯ ಪರಿಶುಭ್ರತೆ, ರಕ್ಷಣೆ, ಶಾಂತಿ-ಭದ್ರತೆಗಳ, ವ್ಯವಸ್ಥೆ ಆಗಿದ್ದಿತು

ಬ್ರಹ್ಮೋತ್ಸವದ ವಿವಿಧ ಉತ್ಸವಗಳನ್ನು ಕ್ಲೋಸ್ಡ್ ಸರ್ಕ್ಯೂಟ್ ಟಿ.ವಿ. ಯಲ್ಲಿ ಮುಖ್ಯ ಸ್ಥಳಗಳಲ್ಲಿ ಜನ ಕಾಣುವಂತೆ ಪ್ರದರ್ಶನ ವ್ಯವಸ್ಥೆ ಮಾಡಲಾಗಿದ್ದಿತು. ತಿರುಪತಿಯಲ್ಲಿಯೂ, ಹೆಚ್ಚಿದ ಯಾತ್ರಿಕ ಸಂದೋಹ ವ್ಯವಸ್ಥಿತವಾಗಿ ಸ್ವಾಮಿಯ ದರ್ಶನವನ್ನು ಹೊಂದಿ, ತಿರುಮಲೆ









ಯಲ್ಲಿನ ವಾಹನ ಸೇವೆಗಳು, ಆಸ್ಥಾನ ಮಂಟಪದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ವೀಕ್ಷಿಸಲು ಅನುಕೂಲವಾಗುವಂತೆ ಸುದರ್ಶನ ಕಂಕಣದ ಏರ್ಪಾಡು ಹೆಚ್ಚು ಯಶಸ್ವಿಯಾಯಿತು ಭಕ್ತರು ಸುದರ್ಶನ ಕೌಂಟರ್‌ಗಳಲ್ಲಿ ತಮ್ಮ ಪಾಲಿನ ಕಂಕಣವನ್ನು ಪಡೆದು, ದರ್ಶನದ ಬಗ್ಗೆ ಆಶ್ವಸ್ತರಾಗಿ ತಮ್ಮ ಯಾತ್ರೆಯ ಇನ್ನಿತರ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದರು ಎಂಬುದನ್ನು ತಿರುಮಲೆಯ ತುಂಬೆಲ್ಲ ಕಂಡು ಬರುತ್ತಿದ್ದ ಯಾತ್ರಿಕರ ಬಲಗೈಗೆ ಕಟ್ಟಿದ್ದ ಕಾಗದದ ಕಂಕಣಗಳಿಂದ ತಿಳಿಯಬಹುದಾಗಿದ್ದಿತು

ಬ್ರಹ್ಮೋತ್ಸವಗಳಿಗೆ ಮುನ್ನ ಮಂಗಳವಾರದಂದು ಸೆಪ್ಟಂಬರ್ 7 ರಂದು ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ಕೋಯಿಲ್ ಆಳ್ವಾರ್ ತಿರುಮಂಜನ ಇದೊಂದು ಆಲಯ ಶುದ್ಧೀಕರಣ ಕ್ರಿಯೆ ಗರ್ಭಗುಡಿಯನ್ನೂ, ಇತರ ಭಾಗಗಳನ್ನೂ, ಇತರ ಪರಿವಾರ ದೇವತಾ ಸನ್ನಿಧಿಗಳನ್ನೂ ಮಂಗಳ ದ್ರವ್ಯಗಳಿಂದ ಲೇಪನಗೊಳಿಸಿ ಶುದ್ಧಮಾಡುವ ಕಾರ್ಯಕ್ರಮ (ವರ್ಷಕ್ಕೆ ನಾಲ್ಕು ಬಾರಿ ನಡೆಯುತ್ತದೆ ಈ ಕಾರ್ಯಕ್ರಮ)

## ಅಂಕುರಾರ್ಪಣೆ :

ಸ್ವಾಮಿ ಬ್ರಹ್ಮೋತ್ಸವದ ಅಂಕುರಾರ್ಪಣೆ ಸೆಪ್ಟಂಬರ್ 12 ರಂದು ಭಾನುವಾರ ಸಂಜೆ ನಡೆಯಿತು ಸ್ವಾಮಿ ಸೈನ್ಯಾಧಿಪತಿ ವಿಷ್ವಕ್ಸೇನರು, ಆಯುದ ದರಿಸಿ ರಥಬೀದಿಯಲ್ಲಿ ಸಂಚರಿಸಿ ಬ್ರಹ್ಮೋತ್ಸವದ ಏರ್ಪಾಡುಗಳನ್ನು ನಡೆಸುವುದು, ಕುಂಭಗಳಲ್ಲಿ ಅಂಕುರಾರ್ಪಣೆಗೆಂದು ಮೃತ್ ಸಂಗ್ರಹ ಮಾಡುವುದು, ಸಕಲ ದೇವತೆಗಳನ್ನು ಉತ್ಸವಗಳಿಗಾಗಿ ಆಹ್ವಾನಿಸುವುದು - ಇಲ್ಲಿನ ಕಾರ್ಯಕ್ರಮ ತಿ ತಿ ದೇ, ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬರಾವು ಸಂಯುಕ್ತ ಕಾರ್ಯನಿರ್ವಹಣಾಧಿಕಾರಿಗಳಾದ ಶ್ರೀ ಬಾಲಸುಬ್ರಹ್ಮಣ್ಯಂ, ಶ್ರೀ ರಾಮಕೃಷ್ಣಯ್ಯ ಸಂರಕ್ಷಣಾಧಿಕಾರಿ ಶ್ರೀ ವಿಜಯಕುಮಾರ್ ಮೊದಲಾದ ಅಧಿಕಾರಿಗಳು ಈ ಕಾರ್ಯಕ್ರಮದಲ್ಲಿ ಬಾಗವಹಿಸಿದ್ದರು

## ಧ್ವಜಾರೋಹಣ :

ಬ್ರಹ್ಮೋತ್ಸವಗಳ ಆರಂಭ ತಾಂತ್ರಿಕವಾಗಿ ಧ್ವಜಾರೋಹಣದಿಂದ ಆಗುವುದು ಈ ಕಾರ್ಯಕ್ರಮ ಸೋಮವಾರ ಸೆಪ್ಟಂಬರ್ 13 ರಂದು ನಡೆ

ಯಿತು ಆಲಯದ ಧ್ವಜಸ್ತಂಭಕ್ಕೆ ಅಭಿಷೇಕ, ನಿವೇದನೆಗಳಾದ ಮೇಲೆ ಸ್ವಾಮಿಯ ಸಾಮ್ರಾಜ್ಯವನ್ನು ವಿವರಿಸುವ ಗರುಡ ಧ್ವಜವನ್ನು ವೇದೋಕ್ತ ಮಂತ್ರಗಳ, ಮಂಗಳ ವಾದ್ಯಗಳ ಧ್ವನಿಯ ಹಿನ್ನೆಲೆಯಲ್ಲಿ ಹಾರಿಸಲಾಯಿತು ಅನಂತರ ಏಳು ಹೆಡೆಗಳ ಆದಿಶೇಷನ ವಾಹನದಲ್ಲಿ ಸ್ವಾಮಿ ಶ್ರೀ ಭೂದೇವಿಯರೊಡನೆ ಸೇರಿ ಊರಬೀದಿಗಳಲ್ಲಿ ಮೆರವಣಿಗೆ ಬಂದು ಭಕ್ತಜನರಿಗೆ ದರ್ಶನವನ್ನಿತ್ತರು

## ಇತರ ವಾಹನಗಳು :

ಸೆಪ್ಟಂಬರ್ 14 ರಂದು ಮಂಗಳವಾರ ಬೆಳಗ್ಗೆ ಚಿಕ್ಕಶೇಷವಾಹನದಲ್ಲಿ ಸ್ವಾಮಿ ಊರ ಮೆರವಣಿಗೆಯಲ್ಲಿ ಹೊರಬಂದರು ಅಂದು ರಾತ್ರಿ ಪರಮಹಂಸಸ್ವರೂಪಿಯಾದ ಪರಮಾತ್ಮ ಹಂಸವಾಹನದಲ್ಲಿ ಕುಳಿತು ಭಕ್ತರಿಗೆ ಜ್ಞಾನ ಪ್ರದಾತರಾಗಿ ಕಂಡು ಬಂದರು ಅಶ್ವ, ಗಜ, ಪದಾತಿದಳಗಳೂ, ವೇದ ಪ್ರಬಂಧ ಪಾರಕರೂ ಸ್ವಾಮಿಯ ಹಿಂದೆ ಮುಂದೆ ನಡೆಯುತ್ತ ಶೋಭೆಯನ್ನು ತಂದರು ಹರಿದಾಸರೂ ಭಜನಗೋಷ್ಠಿಗಳೂ ಉತ್ಸಾಹದಿಂದ ಭಗವಂತನನ್ನು ಬರಮಾಡಿಕೊಂಡರು

ಸೆಪ್ಟಂಬರ್ 15 ರಂದು ಬುಧವಾರ ಬೆಳಗ್ಗೆ ನಡೆಯಿತು ಸಿಂಹವಾಹನ ಉತ್ಸವ ಅಂದು ರಾತ್ರಿ ಮುತ್ತಿನ ಚಪ್ಪರ ವಾಹನ ಹೆಚ್ಚಿನ ಭಕ್ತರನ್ನು ಆಕರ್ಷಿಸಿತು

ಸೆಪ್ಟಂಬರ್ 16 ರಂದು ಗುರುವಾರ ಬೆಳಗ್ಗೆ ಕಲ್ಪವೃಕ್ಷವಾಹನದಲ್ಲಿಯೂ ಸಾಯಂಕಾಲ ಸರ್ವಭೂಪಾಲವಾಹನದಲ್ಲಿಯೂ ಸ್ವಾಮಿಯವರು ಮೆರವಣಿಗೆಯಲ್ಲಿ ಹೊರಬಂದರು

## ಸಿಂಹವಾಹನ :

ಈ ಬಾರಿಯ ಸಿಂಹವಾಹನದ ಸೊಬಗು ಹೊಸದು ಕಾರಣ ಈ ಬಾರಿ ಹಳೆಯ ಸಿಂಹ ವಾಹನದ ಬದಲಿಗೆ ಹೊಸದಾಗಿ ನಿರ್ಮಾಣವಾದ ಸಿಂಹವಾಹನದಲ್ಲಿ ಸ್ವಾಮಿಯ ಮೆರವಣಿಗೆ ನಡೆಯಿತು ರೂ 12 5 ಲಕ್ಷ ರೂಪಾಯಿನ ಅಂದಾಜು ವೆಚ್ಚದಲ್ಲಿ 61 ಭಾಗಗಳಲ್ಲಿ ನಿರ್ಮಿಸಿ ಜೋಡಿಸಲಾದ ವಾಹನ ಸಿಂಹವಾಹನ ಇದಕ್ಕೆ ಬಳಕೆಯಾದ ಬಂಗಾರ 2 485 ಕಿ.ಗ್ರಾಂ, ತಾಮ್ರ 113 5 ಕೆ ಜಿ, ಬಂಗಾರದ ಬೆಲೆ 11 43 ಲಕ್ಷ ರೂಪಾಯಿಗಳಾದರೆ ತಾಮ್ರದ ಬೆಲೆ 1 06 ಲಕ್ಷ ರೂಪಾಯಿಗಳು ಹೊಸ ಹೊಗರಿನಿಂದ ಕೂಡಿದ ಬಂಗಾರದ ಸಿಂಹ ವಾಹನ







ದಲ್ಲಿ 'ಸ್ವಯಮೇವ ಮೃಗೇಂದ್ರತಾ' ಎಂಬಂತೆ ಪ್ರಾಣಿಗಳಲ್ಲಿ ವನರಾಜನಾದ ಸಿಂಹದೋಪಾದಿಯಲ್ಲಿ ಪುರುಷೋತ್ತಮನು ಪುರವೀಧಿಗಳಲ್ಲಿ ಬರುತ್ತಿರಲು ಪರಿಜನರೂ ಪ್ರಜೆಗಳೂ ಪರಿಪರಿಯ ಉತ್ಸಾಹ, ಸಂಭ್ರಮಗಳಿಂದ ಸ್ವಾಮಿಯನ್ನು ಸ್ವಾಗತಿಸಿದರು

## ಗರುಡ ಸೇವೆ :

ಸೆಪ್ಟಂಬರ್ 17 ರಂದು ಶುಕ್ರವಾರ ಬೆಳಗ್ಗೆ ಸ್ವಾಮಿ ಮೋಹಿನೀ ಅವತಾರದಲ್ಲಿ ಹೊರಬಂದರು ಸ್ವಾಮಿ ಭುವನ ಮೋಹಿನಿಯ ರೂಪದಲ್ಲಿ ಪುರವೀಧಿಗಳಲ್ಲಿ ಅಡ್ಡ ಪಲ್ಲಕ್ಕಿಯನ್ನೇರಿ ಬರುತ್ತಿರಲು ಜೊತೆಗೇ ಶ್ರೀಕೃಷ್ಣಸ್ವಾಮಿಯೂ ಮತ್ತೊಂದು ಪಲ್ಲಕ್ಕಿಯಲ್ಲಿ ದಯಮಾಡಿಸಿದರು.

ಅಂದು ಸಂಜೆ ಗರುಡವಾಹನ. ಬ್ರಹ್ಮೋತ್ಸವದಲ್ಲಿ ಒಂದು ಮುಖ್ಯ ಘಟ್ಟ. ಶ್ರೀವಿಲ್ಲಿಪುತ್ತೂರಿನಿಂದ ಆಂಡಾಳ್ ಮುಡಿದ ತುಲಸೀಮಾಲೆ ಸ್ವಾಮಿಯ ಸೇವೆಗೆಂದು ಆಗಮಿಸುವುದು ಹಾಗೆಯೇ ಮದರಾಸಿನಿಂದ ಹೊಸದಾಗಿ ಮಾಡಿದ ಶ್ವೇತಛತ್ರಗಳು ಸ್ವಾಮಿಯ ಸೇವೆಗೆಂದು ಕಾಲುನಡಿಗೆಯಲ್ಲಿ, ಮೆರವಣಿಗೆಯಲ್ಲಿ ಬರುತ್ತದೆ ಆಂಧ್ರಪ್ರದೇಶದ ಸರ್ಕಾರದ ಪರವಾಗಿ ರೇಷ್ಮೆ ವಸ್ತ್ರಗಳು ಸ್ವಾಮಿಗೆ ಕಾಣಿಕೆಯಾಗಿ ಮುಖ್ಯಮಂತ್ರಿಗಳು ತಲೆಯ ಮೇಲೆ ಹೊತ್ತು ತರುತ್ತಾರೆ

ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್ ಚಂದ್ರಬಾಬು ನಾಯುಡು ಅವರನ್ನು ತಿರುಮಲೆಯ ಆಲಯದ ಬಳಿಯ ಬೇಡಿ ಆಂಜನೇಯಸ್ವಾಮಿಯ ಆಲಯದ ಹತ್ತಿರ ಆಲಯದ ಅಧಿಕಾರಿಗಳೂ ಪುರೋಹಿತರೂ ಸ್ವಾಗತಿಸಿದರು ಆಸ್ಥಾನ ವಿದ್ವಾಂಸ ಶ್ರೀ ಮಾಡಂಬಾಕಂ ಶ್ರೀನಿವಾಸ ಭಟ್ಟಾಚಾರ್ಯರು ಮುಖ್ಯಮಂತ್ರಿಗಳಿಗೆ ತಲೆಯ ಪೇಟ ಕಟ್ಟಿ ರೇಷ್ಮೆ ವಸ್ತ್ರವನ್ನಿಟ್ಟ ಬಂಗಾರದ ತಳಿಗೆಯನ್ನು ತಲೆಯಮೇಲಿಟ್ಟರು. ಮುಖ್ಯಮಂತ್ರಿಗಳು ಮಹಾದ್ವಾರದ ಮೂಲಕ ಆಲಯವನ್ನು ಸೇರಿ ಸ್ವಾಮಿಗೆ ರೇಷ್ಮೆ ವಸ್ತ್ರಗಳನ್ನು ಒಪ್ಪಿಸಿದರು ಮುಖ್ಯಮಂತ್ರಿಗಳೊಡನೆ ಅವರ ಪತ್ನಿ ಶ್ರೀಮತಿ ಭುವನೇಶ್ವರಿ ಪುತ್ರ ಚಿ|| ಲೋಕೇಶ್ ಅವರುಗಳೂ ಆಗಮಿಸಿದ್ದರು ಆಂಧ್ರಪ್ರದೇಶದ ಮುಖ್ಯ ಕಾರ್ಯದರ್ಶಿ ಶ್ರೀ ಜೆ ರಾಮಬಾಬು (ತಿ ತಿ ದೇ ವಿಶೇಷ ಪ್ರಾಧಿಕಾರದ ಅಧ್ಯಕ್ಷರು) ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ. ಸುಬ್ಬರಾವು ರಾಜ್ಯವಿದ್ಯುತ್ ಶಾಖಾ ಸಚಿವ ಶ್ರೀ ಕಲಿದಿಂಡಿ ರಾಮಚಂದ್ರರಾಜು ಮೊದಲಾದ ಪ್ರಮುಖರೂ ಉಪಸ್ಥಿತರಿದ್ದರು.

ಉತ್ಸವಮೂರ್ತಿ ಶ್ರೀ ಮಲೆಯಪ್ಪಸ್ವಾಮಿ ರತ್ನ ವಜ್ರ ಕಿರೀಟಧಾರಿಯಾಗಿ ಪೀತಾಂಬರಧಾರಿಯಾಗಿ ಗರುಡವಾಹನವನ್ನು ಏರಿದಾಗ ಅವರಿಗೆ ಮೂಲವರರಿಗೆ ಅಲಂಕರಿಸಲಾಗುವ ಲಕ್ಷ್ಮೀ ಹಾರವನ್ನೂ ಮೈಸೂರು ಮಹಾರಾಜರು ನೀಡಿದ್ದ ಸಹಸ್ರನಾಮ ಹಾರವನ್ನೂ ಮತ್ತಿತರ ಮುಖ್ಯ ಆಭರಣಗಳನ್ನೂ ತೊಡಿಸಲಾಗಿದ್ದಿತು ಅಲ್ಲಲ್ಲಿ ಭಕ್ತ ,ನ ಸಾಲುಗಟ್ಟಿ ಸ್ವಾಮಿಯ ಬಳಿಬಂದು ಆರಯನ್ನು ಸ್ವೀಕರಿಸುತ್ತಿದ್ದರು ರಸ್ತೆಯ ಇಕ್ಕೆಲಗಳಲ್ಲಿಯೂ ಜನ ತುಂಬಿ ಸ್ವಾಮಿಯನ್ನು ಸ್ವಾಗತಿಸಿದರು.

## ವಸಂತೋತ್ಸವ :

ಸೆಪ್ಟಂಬರ್ 18 ರಂದು ಶನಿವಾರ ಬೆಳಗ್ಗೆ ಹನುಮದ್ವಾಹನ ಸಂಜೆ ಗಜವಾಹನಗಳು ನಡೆದವು. ಅತ್ಯಂತ ಹೆಚ್ಚಿನ ಜನವನ್ನು ಆಕರ್ಷಿಸಿದವು. ಅಂದು ಮಧ್ಯಾಹ್ನ ಸ್ವಾಮಿಗೆ ವಸಂತೋತ್ಸವ ಸ್ವಾಮಿ ವಸಂತೋತ್ಸವದಲ್ಲಿ ಶ್ರೀ ಭೂ ಸಹಿತ ಪಾಲುಗೊಂಡರು ಅಂದು ಕನಕರಥದಲ್ಲಿ ಮೆರವಣಿಗೆ ಅಪಾರ ಆಕರ್ಷಣೆಯನ್ನು ಒಡ್ಡಿದ್ದಿತು. ಈ ರಥ ರಂಗ ಡೋಲೋತ್ಸವದಲ್ಲಿ ಅಸಂಖ್ಯ ಜನ ಭಾಗವಹಿಸಿದ್ದರು

## ಸೂರ್ಯಚಂದ್ರ ವಾಹನಗಳು :

ಸೆಪ್ಟಂಬರ್ 19 ರಂದು ಭಾನುವಾರ ಬೆಳಗ್ಗೆ ಸೂರ್ಯ ಹುಟ್ಟಿದ ಕೂಡಲೇ ಸ್ವಾಮಿ ಸೂರ್ಯಪ್ರಭವಾಹನದಲ್ಲಿ ಊರಮೆರವಣಿಗೆಯಲ್ಲಿ ಬಂದರು ಅಂದು ಸಂಜೆ ಚಂದ್ರಪ್ರಭ ವಾಹನದಲ್ಲಿ ಮೆರವಣಿಗೆ ಸೂರ್ಯ ಚಂದ್ರರಿಬ್ಬರೂ ಸ್ವಾಮಿಯ ಸೇವೆಗೆ ಒದಗುವ ಸೌಂದರ್ಯದ ಆತ್ಮತೃಪ್ತಿಕಾರಕ ಉತ್ಸವಗಳು ಅತಿ ಹೆಚ್ಚಿನ ಜನವನ್ನು ಆಕರ್ಷಿಸಿದವು.

## ರಥೋತ್ಸವ :

ಸೆಪ್ಟಂಬರ್ 20 ರಂದು ಸೋಮವಾರ ಸ್ವಾಮಿಯ ರಥೋತ್ಸವ ದೇಹರಥದ ಸ್ವಾಮಿ ಆತ್ಮರಥಿಯಾದ ಶ್ರೀನಿವಾಸದೇವರು ಸಿರಿ ಭುವಿಗಳ ಜೊತೆ ರಥವೇರಿದಾಗ ಜನಕ್ಕೆ ಉತ್ಸಾಹ ಸಂಭ್ರಮಗಳ ಉತ್ತುಂಗ ಸ್ಥಿತಿ ಪಾರ್ಥಸಾರಥಿಯೂ ಆದ ತಾನೇ ನಿಜವಾದ ರಥಿಕ ಮಿಕ್ಕೆಲ್ಲ ನಿಮಿತ್ತ ಮಾತ್ರಗಳು ಎಂಬುದನ್ನು ಸಾರಿ ಹೇಳುವಂತೆ ಸ್ವಾಮಿ ಊರ ಮೆರವಣಿಗೆಯಲ್ಲಿ ನಡೆದು ಬಂದರು ಅತ್ಯಧಿಕ ಮಂದಿ ಭಕ್ತರು ರಸ್ತೆಯ ಇಕ್ಕೆಲ್ಲಗಳಲ್ಲಿ ನಿಂತು ಸ್ವಾಮಿಯನ್ನು ಸ್ವಾಗತಿಸಿದರು.



## ಚಕ್ರಸ್ನಾನ :

ಸೆಪ್ಟಂಬರ್ 21 ರಂದು ಚಕ್ರಸ್ನಾನ ಅಂದು ಮಂಗಳವಾರ ಬೆಳಗ್ಗೆ ಸ್ವಾಮಿ ಪುಷ್ಕರಿಣಿಯಲ್ಲಿ ಸುದರ್ಶನ ಚಕ್ರಕ್ಕೆ ವೇದೋಕ್ತವಾಗಿ ಚಕ್ರಸ್ನಾನ ಆಸ್ಥಾನ ಪ್ರಧಾನಾರ್ಚಕ ಶ್ರೀ ಮಾಡಂಬಾಕಂ ಶ್ರೀನಿವಾಸ ಭಟ್ಟಾಚಾರ್ಯರ ನೇತೃತ್ವದಲ್ಲಿ ತಿರುಮಂಜನವಾಗಿ, ವರಾಹಸ್ವಾಮಿಯ ಆಲಯದ ಬಳಿ ಚಕ್ರಸ್ನಾನವಾದಾಗ ಅತ್ಯಂತ ಹೆಚ್ಚಿನ ಮಂದಿ ಪುಷ್ಕರಿಣಿಯ ಮೆಟ್ಟಿಲುಗಳ ಮೇಲೆ ಕುಳಿತು ವೀಕ್ಷಿಸಿದರು ಸಾವಿರಾರು ಮಂದಿ ಪುಷ್ಕರಿಣಿಯಲ್ಲಿ ಸ್ನಾನ ಮಾಡಿ ಪುನೀತ ಭಾವಹೊಂದಿದರು

ಕಾರ್ಯಕ್ರಮದಲ್ಲಿ ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬರಾವ್, ಸಂಯುಕ್ತ ಕಾರ್ಯನಿರ್ವಹಣಾಧಿಕಾರಿಗಳು ಶ್ರೀ ಬಾಲಸುಬ್ರಹ್ಮಣ್ಯಂ, ಶ್ರೀ ರಾಮಕೃಷ್ಣಯ್ಯ ಮತ್ತಿತರ ಅಧಿಕಾರಿಗಳು ಭಾಗವಹಿಸಿದ್ದರು



## ಫಲಪುಷ್ಪ ಪ್ರದರ್ಶನ :

ತಿರುಮಲೆಯ ಶೇಷಾದ್ರಿನಗರದ ಉಪವನದ ಹಸಿರು ಬಯಲಿನಲ್ಲಿ ತಿ ತಿ ದೇ ಉಪವನ ವಿಭಾಗದವರಿಂದ ಫಲಪುಷ್ಪ ಪ್ರದರ್ಶನ ಏರ್ಪಾಡಾಗಿದ್ದಿತು ಸೆಪ್ಟಂಬರ್ 13 ರಂದು ಈ ಪ್ರದರ್ಶನವನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬರಾವ್ ಅವರು ಉದ್ಘಾಟಿಸಿದರು ತರಕಾರಿಗಳನ್ನು ವಿವಿಧ ದೇವತಾಕೃತಿಗಳನ್ನಾಗಿ ರೂಪಿಸಿ ಪ್ರದರ್ಶನಕ್ಕೆ ಇಡಲಾಗಿದ್ದಿತು ಇದರ ರೂಪಶಿಲ್ಪಿ ಬೆಂಗಳೂರಿನ ಶ್ರೀಮತಿ ಸೌಭಾಗ್ಯ ಅಯ್ಯಂಗಾರ್ ಅವರು ಜನಮೆಚ್ಚುಗೆಯನ್ನು ಪಡೆದರು ವಿವಿಧ ಪುಷ್ಪಗಳಲ್ಲಿ ತಿ

ತಿ. ದೇ. ಉದ್ಯಾನವನ ವಿಭಾಗದವರು ವಿವಿಧ ರೀತಿಯ ದೇವತಾಮೂರ್ತಿ ಚಿತ್ರಗಳನ್ನು ಬಿಡಿಸಿದ್ದರು ಈ ರೀತಿಯ ಪುಷ್ಪನಿರ್ಮಿತ ದೇವತಾ ಶಿಲ್ಪಗಳು ತಿರುಮಲೆಯ ವಿವಿಧ ಸ್ಥಳಗಳಲ್ಲಿಯೂ ಸ್ವಾಗತ ಕಮಾನುಗಳಲ್ಲಿಯೂ ಶೋಭಿಸಿದ್ದವು. ಉದ್ಯಾನವನ ಶಾಖೆಯ ಅಧಿಕಾರಿ ಶ್ರೀ ನಾಥ ಮುನಿರೆಡ್ಡಿ ಅವರ ನೇತೃತ್ವದಲ್ಲಿ ಸರಿ ಸುಮಾರು 200 ಮಂದಿ ಕೆಲಸಗಾರರು ಶ್ರಮಿಸಿ ಇವುಗಳನ್ನು ಸಾಧ್ಯಗೊಳಿಸಿದ್ದರು ದೇವರ ವಿವಿಧ ಉತ್ಸವ ವಾಹನಗಳ ಅಲಂಕಾರ, ದೇವರಿಗೆ ಸಮರ್ಪಿಸಿದ ಹಾರ ತುರಾಯಿಗಳ ಕುಸುರಿಗೆಲಸ, ತೋರಣ ಮಂಟಪಗಳ ಮಾವಿನ ಚಪ್ಪರಗಳ ಅಲಂಕಾರಗಳು - ಪ್ರತ್ಯೇಕವಾದ ಕುಶಲ ಕರ್ಮವನ್ನು ಅಪೇಕ್ಷಿಸಿ ಸಾರ್ಥಕ್ಯಪಡೆದವು

## ಅರಣ್ಯ ವಿಭಾಗ ಪ್ರದರ್ಶನ :

ತಿ.ತಿ.ದೇ ಅರಣ್ಯ ವಿಭಾಗದವರೂ ಇಲ್ಲಿಯೇ ಪ್ರತ್ಯೇಕವಾದ ಆಕರ್ಷಕವಾದ ಪ್ರದರ್ಶನವನ್ನು ಏರ್ಪಡಿಸಿದ್ದರು ವಿವಿಧ ಅರಣ್ಯ ವಸ್ತುಗಳ ಸಮೂನೆಗಳೇ ಅಲ್ಲದೆ, ಅರಣ್ಯ ತರು ಲತಾ ಗುಲ್ಮಗಳ ಪ್ರದರ್ಶನದ ಏರ್ಪಾಡೂ, ವಿವಿಧ ಅರಣ್ಯ ಪ್ರಾಣಿಗಳ ಜೀವ ಜಾಲದ ಪ್ರದರ್ಶನವೂ ಏರ್ಪಾಡಾಗಿದ್ದಿತು. ವಿವಿಧ ಅರಣ್ಯ ವಸ್ತುಗಳ ಮಾರಾಟದ ಏರ್ಪಾಡೂ ಆಗಿದ್ದು ಪೂಜೋಪಯೋಗಿ ಆದ ಶ್ರೀಗಂಧದ ಚಕ್ಕೆಗಳ ಖಚಿತ ತೂಕದ ಸೂಕ್ತ ದರಗಳಲ್ಲಿನ ತುಂಡುಗಳು ಮಾರಾಟವಾದವು

## ವನೌಷಧ ಪ್ರದರ್ಶನ :

ಆಯುರ್ವೇದ ಪ್ರಚಾರದ ಅಂಗವಾಗಿ, ಆರೋಗ್ಯ ಪರಿಜ್ಞಾನದ, ಪರಿಸರ ರಕ್ಷಣೆಯ, ಪ್ರಚಾರದ ಅಂಗವಾಗಿ ವನೌಷಧ ವಿಭಾಗದ ಪ್ರದರ್ಶನವೂ ಇಲ್ಲಿಯೇ ಏರ್ಪಾಡಾಗಿದ್ದಿತು. ಇಲ್ಲಿ ವಿವಿಧ ಔಷಧೀಯ ಮೂಲಿಕೆಗಳನ್ನೂ, ಔಷಧಿಗಳನ್ನೂ ಪ್ರದರ್ಶಿಸಲಾಗಿದ್ದಿತು ನೋಟಕರ ಪ್ರಶ್ನೆಗಳಿಗೆ ಉತ್ತರ ಹೇಳುವ ಸ್ವಯಂಸೇವಾ ಪಡೆಯನ್ನೂ ಏರ್ಪಡಿಸಲಾಗಿದ್ದಿತು. ಆರೋಗ್ಯ ಸೂತ್ರಗಳ ಪರಿಚಯ ಪತ್ರ, ವಿವಿಧ ಗೃಹಬಳಕೆಯ ವಸ್ತುಗಳ ಔಷಧೀಯ ಗುಣ ವಿವರಣೆಯ ಕರಪತ್ರ, ಆಯುರ್ವೇದದ ಸಾಮಾನ್ಯಜ್ಞಾನದ ಕರಪತ್ರಗಳನ್ನು ಉಚಿತವಾಗಿ ವಿತರಿಸಲಾಗಿದ್ದಿತು

## ಕೃತ್ರಿಮ ಜಲಪಾತ :

ತಿರುಮಲೆಯ ರಾಂಬಗೀಚಾ ಅತಿಥಿಗೃಹದ ಬಗ್ಗೆ ತಿ ತಿ ದೇ ಇಂಜನಿಯರಿಂಗ್ ವಿಭಾಗ ಕೃತ್ರಿಮ ಜಲಪಾತವೊಂದನ್ನು ಏರ್ಪಡಿಸಿದ್ದಿತು ಇದರ ಆಕರ್ಷಣೆಯಿಂದಾಗಿ ಈ ಭಾಗದಲ್ಲಿ ಎಂದಿಗಿಂತ ಹೆಚ್ಚು ಮಂದಿ ಸೇರುತ್ತಿದ್ದರು

## ಆಸ್ಥಾನ ಮಂಟಪ ಕಾರ್ಯಕ್ರಮ :

ತಿರುಮಲೆಯ ಆಸ್ಥಾನ ಮಂಟಪದಲ್ಲಿ ಪ್ರತಿ ದಿನ ಬೆಳಗಿನಿಂದ ರಾತ್ರಿಯ ವರೆಗೆ ನಿರಂತರವಾಗಿ ಧಾರ್ಮಿಕ ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಾಗಿದ್ದವು. ದಿನವೂ ಬೆಳಗಿನ ಹೊತ್ತಿನಲ್ಲಿ ವೇದಪಾರಾಯಣ, ಗೀತಾ ಪಠನ, ಧಾರ್ಮಿಕ ಉಪನ್ಯಾಸ, ಮಹಾತ್ಮರ ಸಂದೇಶ, ಸಂಗೀತ, ಹರಿಕಥೆ, ನೃತ್ಯ ನಾಟಕ ಪ್ರದರ್ಶನಗಳು ತಿ ತಿ ದೇ. ಧರ್ಮಪ್ರಚಾರ ಪರಿಷತ್ ವತಿಯಿಂದ ಏರ್ಪಾಡಾಗಿದ್ದವು. ದಾಸಸಾಹಿತ್ಯ ಪ್ರಾಜೆಕ್ಟ್, ಭಾಗವತ ಪ್ರಾಜೆಕ್ಟ್, ಆಳ್ವಾರ್ ಪ್ರಬಂಧ ಪ್ರಾಜೆಕ್ಟ್, ಅನ್ನಮಾಚಾರ್ಯ ಪ್ರಾಜೆಕ್ಟ್, ಸಂಗೀತ ನೃತ್ಯ ಕಲಾಶಾಲೆ ಮೊದಲಾದ ವಿವಿಧ ವಿಭಾಗಗಳವರು ಕಾರ್ಯಕ್ರಮಗಳನ್ನು ನೀಡಿದರು

ಕೊಪ್ಪಳದ ಶ್ರೀ ರಘು ಪ್ರೇಮಾಚಾರ್ಯ, ಉಡುಪಿಯ ಶ್ರೀ ರಾಘವೇಂದ್ರೋಪಾಧ್ಯಾಯ, ಆದೋನಿಯ ಶ್ರೀ ನಾಗರಾಜ ಆಚಾರ್ಯ, ತಿರುಪತಿಯ ಸಂಸ್ಕೃತ ವಿದ್ಯಾಪೀಠದ ಉಪಕುಲಪತಿ ಡಾ|| ಡಿ ಪ್ರಹ್ಲಾದಾಚಾರ್ಯ, ಮುಂಬಯಿನ ಶ್ರೀಮತಿ ತೇಜಸ್ವಿನಿ ಮೊದಲಾದವರು ಹರಿದಾಸ ಸಾಹಿತ್ಯದ ಬಗೆ ಕನ್ನಡದಲ್ಲಿ ಉಪನ್ಯಾಸಗಳನ್ನು ನೀಡಿದರು. ಕನ್ನಡ ಹರಿದಾಸರ ಕೀರ್ತನ ತರಂಗಿಣಿಯೂ ಸ್ವಾಮಿಯ ಸೇವೆಯಲ್ಲಿ ಸಂದಾಯವಾಯಿತು ಈ ಕಾರ್ಯಕ್ರಮ ದಾಸಸಾಹಿತ್ಯ ಪ್ರಾಜೆಕ್ಟಿನದು

## ಸುಪ್ರಭಾತ ಪ್ರದರ್ಶನ :

ತಿರುಮಲೆಯ ವೈಭವೋತ್ಸವ ಮಂಟಪದಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ಸುಪ್ರಭಾತದ ಧ್ವನಿ ಬೆಳಕು ಪ್ರದರ್ಶನವನ್ನು ಮದರಾಸಿನ ಮಾತೃ ಮಂಡಳಿಯ ಶ್ರೀ ಜನಾರ್ದನ ರಾವ್ ಅವರು ಏರ್ಪಡಿಸಿದ್ದದ್ದು ಹೆಚ್ಚಿನ ಮಂದಿಯನ್ನು ಆಕರ್ಷಿಸಿತು ಸೂರ್ಯೋದಯದ ವಿವಿಧ ವರ್ಣಮಯ ಪ್ರಶಾಂತ ವಾತಾವರಣದಲ್ಲಿ ಹಕ್ಕಿಗಳ ಕಲರವನಾದ ಗುಡಿಗಂಟೆಯ ಮಾಧುರ್ಯಗಳು ಪ್ರೇಕ್ಷಕರನ್ನು ಬೇರೆ ಲೋಕಕ್ಕೆ ಒಯ್ಯುವಂತಿದ್ದವು

## ಉದ್ಘಾಟನೆಗಳು :

ವೈಕುಂಠಂ ಕ್ಯೂಕಾಂಪ್ಲೆಕ್ಸ್‌ನಿಂದ ಆಲಯಕ್ಕೆ ಬರುವ ಹಾದಿಯಲ್ಲಿನ (ಹಥೀರಾಮಜೀ ಮಠದ ಪಕ್ಕದ ರಸ್ತೆ) ಹಳೆಯ ಇಳಿಜಾರಿನ ಹಾದಿಯನ್ನು ಜೀರ್ಣೋದ್ಧಾರಗೊಳಿಸಿ ನವೀಕರಿಸಿ 'ಸುಪಥ'ವೆಂದು ಹೆಸರಿಟ್ಟು ಯಾತ್ರಿಕರ ಅನುಕೂಲಕ್ಕೆ ತೆರೆಯಲಾಗಿದೆ ಮೂವತ್ತು (ಲಕ್ಷ ರೂಪಾಯಿಗಳ ವೆಚ್ಚದ ಈ ರಸ್ತೆಯಲ್ಲಿ ನೆರಳಿನ ಕಮಾನು ಹೊದಿಕೆಯೂ ಉಂಟು

ಆಳ್ವಾರ್ ಟ್ಯಾಂಕ್ ಅತಿಥಿಗೃಹವನ್ನು ಸೆಪ್ಟಂಬರ್ 20 ರಂದು ತಿ ತಿ ದೇ ವಿಶೇಷ ಪ್ರಾಧಿಕಾರದ ಅಧ್ಯಕ್ಷ ಶ್ರೀ ಜೆ ರಾಮಬಾಬು ಅವರು (ಆಂಧ್ರಪ್ರದೇಶ ಸರ್ಕಾರದ ಮುಖ್ಯ ಕಾರ್ಯದರ್ಶಿ) ಉದ್ಘಾಟಿಸಿದರು ಹತ್ತು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ನಿರ್ಮಾಣವಾದ ಈ ಅತಿಥಿಗೃಹದಲ್ಲಿ ಮೂವತ್ತೇಳು ಹವಾನಿಯಂತ್ರಿತ ಕೊಠಡಿಗಳಿವೆ

## ಪುಸ್ತಕ ಮಾರಾಟವಾಹನ :

ತಿ.ತಿ ದೇ ಪ್ರಕಟನಶಾಖೆಯ ಪುಸ್ತಕ, ಕ್ಯಾಸೆಟ್‌ಗಳ ಮಾರಾಟಕ್ಕಾಗಿ ಒಂದು ವಿಶೇಷ ಬಸ್ ಅನ್ನು ಏರ್ಪಡಿಸಲಾಗಿದೆ ತಿ ತಿ ದೇ ಕಲಾವಿದ ಡಾ|| ಕೆ ಜಗದೀಶ್ ಅವರ ಮಾದರಿಯಂತೆ ನಿರ್ಮಾಣವಾದ ಈ ಬಸ್‌ನ ಎರಡೂ ಬದಿಯಲ್ಲಿ ಅಂಗಡಿಯಂತೆ ತೆರೆದುಕೊಳ್ಳುವ ನಾಲ್ಕು ರೆಕ್ಕೆಗಳಿದ್ದು ಹಿಂದೆ ಪುಸ್ತಕಪ್ರದರ್ಶನಕ್ಕೆ ಚಿತ್ರಪ್ರದರ್ಶನಕ್ಕೆ ಅನುಕೂಲವಿದೆ ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬರಾವ್ ಅವರು ಈ ಪುಸ್ತಕ ಮಾರಾಟವಾಹನವನ್ನು ಉದ್ಘಾಟಿಸಿದರು ಬಸ್‌ನ ವಿವಿಧ ತೈಲಚಿತ್ರಗಳನ್ನು ತಿ ತಿ ದೇ ಟ್ರಾನ್ಸ್‌ಪೋರ್ಟ್ ಕಲಾವಿದ ಶ್ರೀ ಚಲಪತಿ ಅವರು ಬಿಡಿಸಿದ್ದಾರೆ

## ಕ್ಯಾಲೆಂಡರ್ ಬಿಡುಗಡೆ :

2000 ದ ವರ್ಷದ ತಿ ತಿ ದೇ ಕ್ಯಾಲೆಂಡರ್‌ಗಳ ಬಿಡುಗಡೆಯಾಗಿದೆ ಆಲಯದಲ್ಲಿನ ಸ್ವಾಮಿಯ ಸನ್ನಿಧಿಯಲ್ಲಿ ತಿ ತಿ ದೇ ಕಾರ್ಯನಿರ್ವಹಣಾಧಿಕಾರಿಯವರು ಶ್ರೀ ವೆಂಕಟೇಶ್ವರ ಸ್ವಾಮಿಯ ಮತ್ತು ಶ್ರೀ ವೆಂಕಟೇಶ್ವರಸ್ವಾಮಿ, ಶ್ರೀ ಪದ್ಮಾವತೀ ಅಮ್ಮನವರು ಇಬ್ಬರೂ ಇರುವ ಚಿತ್ರಗಳ ಎರಡು ಕ್ಯಾಲೆಂಡರ್‌ಗಳನ್ನು ಬಿಡುಗಡೆ ಮಾಡಿದರು ಕ್ಯಾಲೆಂಡರ್ ಬಿಡುಗಡೆಯಲ್ಲಿ ತಿ ತಿ ದೇ ಪೌರಸಂಬಂಧಾಧಿಕಾರಿ ಶ್ರೀ ಸುಭಾಷ್‌ಗೌಡ್ ಹಾಗೂ .ಮತ್ತಿತರರು ಭಾಗವಹಿಸಿದ್ದರು ಬಿಡುಗಡೆಯಾದ ಕ್ಯಾಲೆಂಡರುಗಳಿಗೆ ಹೆಚ್ಚಿನ ಬೇಡಿಕೆಯಿದ್ದಿತು.

## ಪುಸ್ತಕ ಮಾರಾಟ :

ಬ್ರಹ್ಮೋತ್ಸವಕ್ಕೆ ಬರುವ ಯಾತ್ರಿಕ ಭಕ್ತರ ಧಾರ್ಮಿಕದಾಹ ನಿವಾರಣೆಗೆ ಪುಸ್ತಕ ಕೇಂದ್ರಗಳನ್ನು ತೆರೆಯಲಾಗಿದ್ದಿತು ಇಲ್ಲಿ ತೆಲುಗು ಭಾಷೆಯಲ್ಲಿ ವಿಷ್ಣು ಸಹಸ್ರನಾಮ, ಶ್ರೀ ವೆಂಕಟೇಶ್ವರ ಸುಪ್ರಭಾತ, ಮತ್ತಿತರ ಭಾಷೆಗಳ ಸಪ್ತಗಿರಿ ಪತ್ರಿಕೆಗಳನ್ನು ಉಚಿತವಾಗಿ ವಿತರಿಸಲಾಯಿತು ತಿ ತಿ ದೇವಸ್ಥಾನಗಳ ಧಾರ್ಮಿಕ ಪ್ರಕಟನೆಗಳು (ರಿಯಾಯಿತಿ 10 ರಿಂದ 25 ಶತಾಂಶ) ಹಾಗೂ ತಿ ತಿ ದೇ ಆರ್ಥಿಕ ಸಹಾಯ ಪಡೆದ ಕೃತಿಗಳು (ರಿಯಾಯಿತಿ 50 ಶತಾಂಶ) ತಿ ತಿ ದೇ ಸಂಗೀತದ ಕ್ಯಾಸೆಟ್‌ಗಳು ಮಾರಾಟವಾದವು. ತಿರುಮಲೆಯಲ್ಲಿ ಆರ್ಜಿತಂ ಕಚೇರಿ, ವೈಭವೋತ್ಸವ ಮಂಟಪ, ಕಲ್ಯಾಣ ಕಟ್ಟೆ, ಹಾಗೂ ತಿರುಪತಿಯ ಕೇಂದ್ರ ಬಸ್ ನಿಲ್ದಾಣಗಳಲ್ಲಿ ಪುಸ್ತಕ ಪ್ರದರ್ಶನ ಮಾರಾಟ ಕೇಂದ್ರಗಳು ಕೆಲಸ ಮಾಡಿದವು. ಇವುಗಳ ಜೊತೆಗೇ ತಿ ತಿ ದೇ ಪುಸ್ತಕ ಮಾರಾಟದ ವಾಹನವು ತಿರುಮಲೆಯ ಆಯಕಟ್ಟಿನ ಸ್ಥಳಗಳಲ್ಲಿ ಜನ ಕೂಡುವೆಡೆಗಳಲ್ಲಿ ಅಗಡಿಯನ್ನು ತೆರೆದು ಮಾರಾಟದಲ್ಲಿ ಕೈವಾರವಾಯಿತು ಇಲ್ಲಿನ ಒಟ್ಟು ಮಾರಾಟದ ಮೊತ್ತ ರೂ (ರಿಯಾಯಿತಿ ಹೋಗಿ) 15 ಲಕ್ಷ ರೂಪಾಯಿ

## ಶ್ರೀನಿವಾಸ ಕಲ್ಯಾಣ :

ದಿನಾಂಕ 20 ರಂದು **ಸೋಮವಾರ ಸಂಜೆ ತಿರುಮಲೆಯ ಆಸ್ಥಾನಮಂಟಪದಲ್ಲಿ ತಿ ತಿ.ದೇ ಉದ್ಯೋಗಿಗಳ ನಾಟಕ ಸಂಘದವರು ಶ್ರೀನಿವಾಸಕಲ್ಯಾಣ ತೆಲುಗು ನಾಟಕವನ್ನು ಪ್ರದರ್ಶಿಸಿ ಪ್ರಶಂಸೆ ಪಡೆದರು ಸಪ್ತಗಿರಿಯ ತೆಲುಗು ಉಪ ಸಂಪಾದಕ, ಖ್ಯಾತ ಕಾದಂಬರಿಕಾರ ಶ್ರೀ ಸಿ ಶೈಲ ಕುಮಾರ್ ಅವರು ಬರೆದ ಶ್ರೀನಿವಾಸ ಕಲ್ಯಾಣ ನಾಟಕವನ್ನು ದಿಗ್ದರ್ಶಕ ಶಿರೋಮಣಿ ಅಧ್ಯಾಪಕ ಶ್ರೀ ವೇದವ್ಯಾಸ ರಂಗಭಟ್ಟರ್ ಅವರು ದಿಗ್ದರ್ಶನ ಮಾಡಿ, ಸಂಗೀತ ನೀಡಿದರುರು. ಉದ್ಯೋಗಿಗಳ ಸಮನ್ವಯ ಸಂಘದ ಶ್ರೀ ಸಿ ರಮಣ ಅವರು ನೇತೃತ್ವ ವಹಿಸಿದ್ದರು.**

## ಬ್ರಹ್ಮೋತ್ಸವ ಆದಾಯ :

**ಈ ಬಾರಿಯ ಬ್ರಹ್ಮೋತ್ಸವಗಳಲ್ಲಿನ ಒಟ್ಟು ಆದಾಯ 4 ಕೋಟಿ, 75 ಲಕ್ಷ ರೂಪಾಯಿಗಳು ಇದರಲ್ಲಿ ಹುಂಡಿ ಆದಾಯ 3 26 ಲಕ್ಷ ರೂಪಾಯಿಗಳಾಗಿವೆ**









## ಸ್ವಾಮಿ ಸನ್ನಿಧಿಯಲ್ಲಿ ವೈಮಾನಿಕ ಸೈನ್ಯಾಧಿಕಾರಿ

ಭಾರತದ ವೈಮಾನಿಕ ಪಡೆಗಳ ಅಧಿಪತಿ ಚೀಫ್ ಏರ್‌ಮಾರ್ಷಲ್ ಶ್ರೀ ಎ ವೈ ಟಿಪ್ನಿಸ್ ಅವರು ಕುಟುಂಬ ಸಹಿತರಾಗಿ 8-8-99 ರಂದು ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾದಿಸಿದರು ಶ್ರೀಯುತರನ್ನು ಆಲಯ ಸಂಪ್ರದಾಯಾನುಗುಣವಾಗಿ ತಿ ತಿ ದೇ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಅವರು ಸ್ವಾಗತಿಸಿದರು ದರ್ಶನಾನಂತರ ಅವರಿಗ ರಂಗನಾಯಕ ಮಂಟಪದಲ್ಲಿ ವೇದಾಶೀರ್ವಚನವನ್ನೂ ಸ್ವಾಮಿ ಪ್ರಸಾದಗಳನ್ನೂ ನೀಡಲಾಯಿತು

## ಕಾರ್ಗಿಲ್ ಸಂತ್ರಸ್ತರನಿಧಿಗೆ ಕಾಣಿಕೆ

ಕಾರ್ಗಿಲ್‌ನ ಸಮರದಲ್ಲಿ ಹುತಾತ್ಮರಾದ ಸೈನಿಕರ ಕುಟುಂಬಗಳ ನೆರವಿಗಾಗಿ ನೀಡಿದ ಜನಸಾಮಾನ್ಯ ವಂತಿಗೆಯ ಅಂಗವಾಗಿ ತಿ ತಿ ದೇ ಸಾರಿಗೆ ವಿಭಾಗದ ಉದ್ಯೋಗಿಗಳು ತಮ್ಮ ವಂತಿಗೆಯಾಗಿ 68,000 ರೂಪಾಯಿಗಳನ್ನು ನೀಡಿದ್ದಾರೆ ಈ ಮೊತ್ತದ ಹಣದ ಡಿ ಡಿ ಯನ್ನು ಉದ್ಯೋಗಿಗಳ ಪರವಾಗಿ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬರಾವ್ ಅವರಿಗೆ ನೀಡಲಾಯಿತು.

## ತಿ.ತಿ.ದೇ ಗಳಲ್ಲಿ ಕಂಪ್ಯೂಟರೀಕರಣ ಬಹುಮಾನ ವಿತರಣ

ತಿ ತಿ. ದೇವಸ್ಥಾನಗಳಲ್ಲಿ ಕಂಪ್ಯೂಟರ್ ವಿಭಾಗವನ್ನು ಏರ್ಪಡಿಸಿ ಆರ್ಜಿತಸೇವೆ, ವಸತಿ ನೀಡಿಕೆ, ಸಂಬಳ ವಿತರಣೆ, ಸುದರ್ಶನ ಕಂಕಣ ವಿತರಣೆ - ಮೊದಲಾದ ವಿಭಾಗಗಳಲ್ಲಿ ಆಡಳಿತವನ್ನು ಸುಗಮಗೊಳಿಸಿ, ಹಸನುಗೊಳಿಸಿ ಆದಾಯವನ್ನು ಹೆಚ್ಚುಗೊಳಿಸಿದ ತಿ ತಿ ದೇ ಉದ್ಯೋಗಿಗಳಿಗೆ - ಇವರೆಲ್ಲ ಸ್ವಯಂಸೇವೆಯಲ್ಲಿ ಕಂಪ್ಯೂಟರ್ ವಿಭಾಗವನ್ನು ಸೇರಿದವರು - ಚಿನ್ನ, ಬೆಳ್ಳಿ ಪದಕಗಳನ್ನು ನೀಡಿ ಗೌರವಿಸಲಾಯಿತು ತಿ ತಿ ದೇ ವಿಶೇಷ ಪ್ರಾಧಿಕಾರದ ಸೆಪ್ಟಂಬರ್ ಸಭೆಯಲ್ಲಿ ಸ್ವಾಮಿ ಪದಕ ಪಡೆದವರ ಚಿತ್ರವನ್ನಿಲ್ಲಿ ದಾಖಲು ಗೊಳಿಸಲಾಗಿದೆ.



Edited and Published on behalf of TT Devasthanams by Dr N S Rama Murthy, M.A. and Printed at TTD Press by M Lakshmana Rao, M A., L.P.T, Manager, TTD Press, Tirupati - 517 507

# ಬರ್ಡ್

## ಸಾರ್ಥಕ ಸೇವೆಯ ಆದರ್ಶ :

ಅಂಗವಿಕಲರ ಪುನರಾವಾಸ, ಪರಿಶೋಧನೆ, ಶಸ್ತ್ರಚಿಕಿತ್ಸೆಗಳ ಬಾಲಾಜಿ ಆಸ್ಪತ್ರೆಯು ( [illegible] ಅಂಡ್ ರಿಹ್ಯಾಬಿಲಿಟೇಷನ್ ಫಾರ್ ದಿ ಡಿಸೇಬಲ್ಡ್) ಮಾನವ ಸೇವೆಯ ಮೂಲಕ ಮಾಧವ [illegible] ಆದರ್ಶ ಪಂತಿಕೆಗೆ ಸಾಕ್ಷಿಯಾಗಿ ಅಂಗವಿಕಲರ ಸೇವೆಯಲ್ಲಿ ನಿರತವಾಗಿದ

1985 ರಲ್ಲಿ ಸ್ಥಾಪನೆಯಾದ ಬರ್ಡ್ ಸಂಸ್ಥೆ ಅಂಗ ರಚನಾ ಶಾಸ್ತ್ರ ಕ್ಷೇತ್ರದಲ್ಲಿ ಹಲವು [illegible] ಹೊಸ [illegible] ಪೋಲಿಯೊ ಪೀಡಿತರು, ಜನ್ಮಾರಭ್ಯ ನ್ಯೂನತೆಗಳು, ಮಿದುಳ ರಕ್ತಪಾತಗಳ ಮೂಲಕ ವಿಕಲಾಂಗರಾದ ರೋಗಿಗಳಿಗೆ ಉತ್ತಮವಾದ ಚಿಕಿತ್ಸೆಯನ್ನು ನೀಡುವ ಈ ಆಸ್ಪತ್ರೆ ಬಡ ಜನತೆಯ, ಅಗತ್ಯವಿದ್ದವರ ಸೇವೆಯಲ್ಲಿ ಸಮರ್ಪಿತವಾಗಿದ

### ಬರ್ಡ್‌ನ ಕೆಲವು ಸಾಧನೆಗಳು, ಅಗತ್ಯಗಳು, ಅನುಕೂಲಗಳು.

* ಬೆನ್ನು ಹುರಿಯ ಘಾಯದ ಚಿಕಿತ್ಸೆಯಲ್ಲಿ ಸದಾಸಿದ್ಧ ಯಂತ್ರೋಪಕರಣಗಳ ಬಳಕೆ
* ಎರಡು ಲಕ್ಷಕ್ಕೂ ಹೆಚ್ಚು ಮಂದಿಯ ಸಫಲ ಚಿಕಿತ್ಸೆಯಾಗಿದೆ
* 300 ಒಳರೋಗಿಗಳ ಹಾಸಿಗೆಗಳ ಚಿಕಿತ್ಸೆಗೆ ಅವಕಾಶವಿರುವ ಕೇಂದ್ರೀಕೃತ ಹವಾನಿಯಂತ್ರಿತ ಆಸ್ಪತ್ರೆ, [illegible]
* ಕೃತಕ ಅಂಗಾಂಗಳ, ಆಧಾರಗಳ, ಆಲಂಬನಗಳ ಉಚಿತ ವಿತರಣೆ
* ಬರ್ಡ್‌ಗಾಗಿ ನೀಡುವ ಎಲ್ಲ ದಾನಗಳೂ ಆದಾಯಕರ ನಿಯಮದ 80 (ಜಿ) ಕಲಮಿನ ಪ್ರಕಾರ ಆದಾಯ ಕರಮುಕ್ತವಾಗಿರುವವು
* ಐದು ಲಕ್ಷ ರೂಪಾಯಿ ಹಾಗೂ ಹೆಚ್ಚಿಗೆ ದಾನ ನೀಡಿದವರ ಹಸರಿನೊಡನೆ ಇರುವ ಛಾಯಚಿತ್ರವನ್ನು ಬರ್ಡ್ ಆಸ್ಪತ್ರೆಯಲ್ಲಿ ಸ್ಥಾಪಿಸಲಾಗುವುದು
* ವರ್ಷಕ್ಕೆ ಒಮ್ಮೆ ಮೂರುದಿನ ದಾನಿಗಳ ಐದುಮಂದಿಗೆ ತಿರುಮಲೆಯಲ್ಲಿ ಉಚಿತದರ್ಶನ, ಸ್ವಾಮಿಯ ಆರತಿ ನೀಡಲಾಗುವುದು
* ಹತ್ತು ಲಕ್ಷ ರೂಗಳು ಹಾಗೂ ಹೆಚ್ಚಿನ ದಾನ ನೀಡುವವರ ಹಸರನ್ನು ಒಂದು ಕೋಣೆಗೆ ಇಡಲಾಗುವುದು
* ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಬೆಳ್ಳಿಯ ಚಿತ್ರದ ಜ್ಞಾಪಿಕೆಯನ್ನು ಐದು ಲಕ್ಷ, ಹತ್ತು ಲಕ್ಷ ರೂಪಾಯಿಗಳ ದಾನಿಗಳಿಗೆ ನೀಡಲಾಗುವುದು

ದಾನಿಗಳು ಉದಾರವಾಗಿ ನೀಡುವ ದಾನಗಳನ್ನು ಬರ್ಡ್‌ನ ವಿವಿಧ ಯೋಜನೆಗಳಲ್ಲಿ ತೊಡಗಿಸಲಾಗುವುದು ಕೃತಕ ಅಂಗಾಂಗಗಳ ಉತ್ಪಾದನೆ ವಿತರಣೆಗೆ, ರೋಗಿಗಳ ಉಚಿತ ಭೋಜನ ರಿಯಾಯಿತಿ ದರಗಳ ಪ್ರಯಾಣ ವೆಚ್ಚಗಳಿಗೆ ಬಳಸಲಾಗುವುದು ದಾನಗಳನ್ನು ಕಾರ್ಯನಿರ್ವಹಣಾಧಿಕಾರಿ, ಬರ್ಡ್ ಟ್ರಸ್ಟ್, ತಿ ತಿ ದೇವಸ್ಥಾನಗಳು, ತಿರುಪತಿ - ಇವರ ಹಸರಿಗೆ ಕಳುಹಿಸಬಹುದು



ಕಾರ್ಯನಿರ್ವಹಣಾಧಿಕಾರಿ,

ತಿ ತಿ ದೇವಸ್ಥಾನಗಳು, ತಿರುಪತಿ - 517 501

